# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ನವೆಂಬರ್ ೨೬, ೨೦೧೫ (ಮಾರ್ಗಶಿರ ೫, ಶಕ ವರ್ಷ ೧೯೩೭)<br>Bengaluru, Thursday, November 26, 2015 (Margashira 5, Shaka Varsha 1937) | ಸಂಚಿಕೆ ೪೭<br>Issue 47 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯನ್ನು "ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆ" ಎಂದು ಮರುಪದವೀಕರಣಗೊಳಿಸುವ ಬಗ್ಗೆ.

**ಓದಲಾಗಿದೆ:** 1. ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ ಇವರ ಪತ್ರ ಸಂ: ಕಾಮಾಇ/ಆ/ಸಿಆರ್–01/14–15, ದಿನಾಂಕ: 24.07.2014 ಹಾಗೂ 20.09.2014.

2. ಸಿಆಸು ಇಲಾಖೆಯ ಅಧಿಸೂಚನೆ ಸಂಖ್ಯೆ: ಡಿಸಿಎ/7/ಎಆರ್‌ಬಿ/93, ದಿನಾಂಕ: 21.01.1994.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಪತ್ರದಲ್ಲಿ ಕಾನೂನು ಮಾಪನಶಾಸ್ತ್ರ ಇಲಾಖೆಯು ಮಾನ್ಯ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ರಾಜ್ಯ ಸಚಿವರ ಹಾಗೂ ಅಪರ ಮುಖ್ಯ ಕಾರ್ಯದರ್ಶಿ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರ ಆಡಳಿತ ನಿಯಂತ್ರಣದಲ್ಲಿ ಕಾರ್ಯನಿರ್ವಹಿಸುತ್ತಿದ್ದರೂ ಸಹ ಸದರಿಯವರ ಖಾತೆಯಲ್ಲಿ ನಮೂದಿಸುತ್ತಿಲ್ಲವೆಂದು, ಸದರಿಯವರ ಖಾತೆಗಳ ವಿವರಗಳಲ್ಲಿ "ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ" ಎಂಬುದರ ಬದಲಿಗೆ ಆಹಾರ, ನಾಗರಿಕ ಸರಬರಾಜು, ಕಾನೂನು ಮಾಪನಶಾಸ್ತ್ರ ಹಾಗೂ ಗ್ರಾಹಕರ ವ್ಯವಹಾರಗಳ ಇಲಾಖೆ ಎಂದು ಬದಲಾಯಿಸುವಂತೆ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಂಗಳೂರು ಇವರು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಅಧಿಸೂಚನೆಯಲ್ಲಿ ಸದರಿ ಇಲಾಖೆಯು ಈ ಹಿಂದೆ "ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ" ಎಂದು ಕರೆಯಲ್ಪಟ್ಟಿದೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ್ದು, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 198 ಇಭತ 2014, ಬೆಂಗಳೂರು, ದಿನಾಂಕ: 21.09.2015.**

ಮೇಲೆ ವಿವರಿಸಿದ ಹಿನ್ನೆಲೆಯಲ್ಲಿ ಹಾಗೂ ಆಡಳಿತದ ಹಿತದೃಷ್ಟಿಯಿಂದ "ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ" ಯನ್ನು ತಕ್ಷಣದಿಂದ ಜಾರಿಗೆ ಬರುವಂತೆ "ಆಹಾರ ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆ" ಎಂದು ಮರುಪದವೀಕರಣಗೊಳಿಸಿ ಆದೇಶಿಸಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು–1) ಇವರ ದಿನಾಂಕ: 25.06.2015 ರ ಅನಧಿಕೃತ ಟಿಪ್ಪಣಿ ಸಂ: ಸಿಆಸುಇ 180 ಸೇನಿಸಿ 2015 (ಪ.ಕ) ರಲ್ಲಿ ನೀಡಿರುವ ಅಭಿಪ್ರಾಯದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಎನ್. ಕೃಷ್ಣಮೂರ್ತಿ,**

ಸರ್ಕಾರದ ಉಪ ಕಾರ್ಯದರ್ಶಿ,

ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

PR. 570

SC. 500

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿನ ಉಪ ಕಾರ್ಯದರ್ಶಿ (ಕಾರ್ಯಕಾರಿ) ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಯೊಂದಿಗೆ ತಾತ್ಕಾಲಿಕವಾಗಿ ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 25 ಸಸಿವಿ 95: ದಿನಾಂಕ: 18–12–1995 ಹಾಗೂ ತಿದ್ದೋಲೆ ದಿನಾಂಕ: 20–12–1995.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 178 ಸಉಸೇ 2014, ದಿನಾಂಕ: 19–06–2014.
3. ಸಿಆಸುಇ, (ಕಾರ್ಯಕಾರಿ) ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 73 ಡಿಇವಿ 2015, ದಿನಾಂಕ: 06.05.2015.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ಮತ್ತು ತಿದ್ದೋಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಕಾರ್ಯಕಾರಿ ವಿಭಾಗದಲ್ಲಿ ಉಪ ಕಾರ್ಯದರ್ಶಿ ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಶೀಘ್ರಲಿಪಿಗಾರರು | 1 |
| 2 | ಕಿರಿಯ ಸಹಾಯಕರು | 1 |
| 3 | ದಲಾಯತ್ | 1 |

ಮೇಲ್ಕಂಡ ತಾತ್ಕಾಲಿಕ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರಿಸುತ್ತಾ ಬರಲಾಗಿದ್ದು, ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ಆದೇಶದಲ್ಲಿ ದಿನಾಂಕ: 01.04.2014 ರಿಂದ ಒಂದು ವರ್ಷದವರೆಗೆ ಮುಂದುವರೆಸಲಾಗಿದೆ. ಪ್ರಸ್ತುತ ಸದರಿ ಹುದ್ದೆಗಳನ್ನು ಮುಂದುವರಿಸುವ ಅಗತ್ಯವಿರುವುದರಿಂದ ದಿನಾಂಕ: 01–04–2015 ರಿಂದ ಖಾಯಂ ಆಗಿ ಮುಂದುವರಿಸುವಂತೆ ಮೇಲೆ ಕ್ರಮ ಸಂಖ್ಯೆ: (3) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಅಧೀನ ಕಾರ್ಯದರ್ಶಿ, (ಕಾರ್ಯಕಾರಿ) ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಇವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 217 ಸಉಸೇ 2015, ಬೆಂಗಳೂರು, ದಿನಾಂಕ: 09ನೇ ಸೆಪ್ಟೆಂಬರ್, 2015.**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿನ ಉಪ ಕಾರ್ಯದರ್ಶಿ (ಕಾರ್ಯಕಾರಿ) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 01–04–2015 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಲಾಗಿದೆ.

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಶೀಘ್ರಲಿಪಿಗಾರರು | 1 |
| 2 | ಕಿರಿಯ ಸಹಾಯಕರು | 1 |
| 3 | ದಲಾಯತ್ | 1 |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10–07–1996ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ,**

**PR. 571** ಸರ್ಕಾರದ ಅಧೀನ ಕಾರ್ಯದರ್ಶಿ,

**SC. 500** ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು–6).

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯಲ್ಲಿನ ಗ್ರೂಪ್ 'ಎ' ಅಧಿಕಾರಿಗಳ ಹುದ್ದೆಗೆ ಬಡ್ತಿ ನೀಡುವ ಬಗ್ಗೆ ಮುಂಬಡ್ತಿ ಸಮಿತಿ ಪರಿಶಿಷ್ಠ ಜಾತಿ/ಪರಿಶಿಷ್ಠ ಪಂಗಡದ ಅಧಿಕಾರಿಯವರನ್ನು ಸದಸ್ಯರನ್ನಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 18 ಸೇನೆನಿ 2011, ದಿನಾಂಕ: 29.08.2011.
2. ಸರ್ಕಾರದ ಆದೇಶ ಸಂಖ್ಯೆ: ನಅಇ 84 ಯುಡಬ್ಲ್ಯೂಇ 2013, ಬೆಂಗಳೂರು, ದಿನಾಂಕ: 07.12.2013.

**ಪ್ರಸ್ತಾವನೆ:**

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ: 07.12.2013ರಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯಲ್ಲಿನ ಗ್ರೂಪ್ 'ಎ' ವೃಂದದ ಹುದ್ದೆಗಳಿಗೆ ಬಡ್ತಿ ನೀಡುವ ಬಗ್ಗೆ ಪರಿಶೀಲಿಸಲು ಈ ಹಿಂದೆ ಪರಿಶಿಷ್ಠ ಜಾತಿ/ಪರಿಶಿಷ್ಠ ಪಂಗಡಕ್ಕೆ ಸೇರಿದ ಶ್ರೀ ರಂಗರಾಜು, ಪ್ರಧಾನ ಮುಖ್ಯ ಅಭಿಯಂತರರು, ಬಿ.ಬಿ.ಎಂ.ಪಿ ಇವರನ್ನು ಇಲಾಖಾ ಮುಂಬಡ್ತಿ ಸಮಿತಿ ಸಭೆಗೆ ಸದಸ್ಯರನ್ನಾಗಿ ನೇಮಿಸಿ ಆದೇಶ ಹೊರಡಿಸಲಾಗಿರುತ್ತದೆ.

ಆದರೆ ಶ್ರೀ ರಂಗರಾಜು, ಪ್ರಧಾನ ಮುಖ್ಯ ಅಭಿಯಂತರರು, ಬಿ.ಬಿ.ಎಂ.ಪಿ ಇವರು ವಯೋ ನಿವೃತ್ತಿ ಹೊಂದಿರುತ್ತಾರೆ. ಆದ್ದರಿಂದ ಪ್ರಸ್ತುತ ಇಲಾಖಾ ಮುಂಬಡ್ತಿ ಸಮಿತಿ ಸಭೆಗೆ ಉಲ್ಲೇಖ (1)ರನ್ವಯ ಪರಿಶಿಷ್ಠ ಪಂಗಡಕ್ಕೆ ಸೇರಿದವರಾದ ಬೆಂಗಳೂರು ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯಲ್ಲಿ ಇಂಜಿನಿಯರ್ ಇನ್ ಚೀಫ್ ಆಗಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಎಸ್. ಕೃಷ್ಣಪ್ಪ ಇವರನ್ನು ಕ.ನ.ನೀ.ಸ ಮತ್ತು ಒಚ ಮಂಡಳಿಯ ಇಲಾಖಾ ಮುಂಬಡ್ತಿ ಸಮಿತಿ ಸಭೆಗೆ ಸದಸ್ಯರನ್ನಾಗಿ ನೇಮಕ ಮಾಡಲು ತೀರ್ಮಾನಿಸಲಾಗಿದೆ. ಅದರಂತೆ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ನಅಇ 61 ಯುಡಬ್ಲ್ಯೂಇ 2015, ಬೆಂಗಳೂರು, ದಿನಾಂಕ: 10–09–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯಲ್ಲಿ ಗ್ರೂಪ್ 'ಎ' ವೃಂದದ ಹುದ್ದೆಗಳಿಗೆ ಬಡ್ತಿ ನೀಡಲು ರಚಿಸಲಾಗಿರುವ ಇಲಾಖಾ ಮುಂಬಡ್ತಿ ಸಮಿತಿ ಸಭೆಗೆ ಪರಿಶಿಷ್ಠ ಪಂಗಡಕ್ಕೆ ಸೇರಿದವರಾದ ಶ್ರೀ ಎಸ್. ಕೃಷ್ಣಪ್ಪ ಇಂಜಿನಿಯರ್ ಇನ್ ಚೀಫ್, ಬೆಂಗಳೂರು ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಇವರನ್ನು ಪರಿಶಿಷ್ಠ ಜಾತಿ/ಪರಿಶಿಷ್ಠ ಪಂಗಡದ ಸದಸ್ಯರನ್ನಾಗಿ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ. ರಾಜೇಂದ್ರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**PR. 573**
**SC. 25**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯಲ್ಲಿನ ಮೈಸೂರು ವಲಯ ಕಛೇರಿ ಹಾಗೂ ವಿನ್ಯಾಸ, ಯೋಜನಾ ಮತ್ತು ಮೇಲ್ವಿಚಾರಣೆ ಕೋಶಕ್ಕೆ ತಲಾ ಒಂದರಂತೆ ಒಟ್ಟು ಎರಡು ಮುಖ್ಯ ಅಭಿಯಂತರರ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1. ವ್ಯವಸ್ಥಾಪಕ ನಿರ್ದೇಶಕರು, ಕ.ನ.ನೀ.ಸ. ಮತ್ತು ಒಚ ಮಂಡಳಿರವರ ಪತ್ರ ಸಂಖ್ಯೆ: ಕಜಮ/ಹೆಚ್. ಆರ್.ಡಿ–1/ಕ.ಸ.53/3426/2014–15, ದಿನಾಂಕ: 07–03–2015.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ: 07—3–2015ರ ಪತ್ರದಲ್ಲಿ ಮಂಡಳಿಯ ನೀರು ಸರಬರಾಜು ಮತ್ತು ಒಳಚರಂಡಿ ಯೋಜನೆಗಳನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸುವ ಉದ್ದೇಶದಿಂದ ಸರ್ಕಾರದ ಅನುಮೋದನೆಗೊಳಪಟ್ಟು ತಾತ್ಕಾಲಿಕವಾಗಿ ಮೂರು ತಿಂಗಳ ಅವಧಿಗೆ ಮಂಡಳಿಯ ಜ್ಞಾಪನಾ ಪತ್ರ ಸಂಖ್ಯೆ: 2560, ದಿನಾಂಕ: 05–12–2014 ರಲ್ಲಿ ಮೈಸೂರು ವಲಯ ಕಛೇರಿಯನ್ನು ಹಾಗೂ ಮಂಡಳಿಯ ಜ್ಞಾಪನ ಪತ್ರ ಸಂಖ್ಯೆ: 2675, ದಿನಾಂಕ: 15–12–2014 ಮತ್ತು ಮಂಡಳಿಯ ಜ್ಞಾಪನ ಪತ್ರ ಸಂಖ್ಯೆ: 2713, ದಿನಾಂಕ: 17–12–2014ರಲ್ಲಿ ವಿನ್ಯಾಸ, ಯೋಜನಾ ಮತ್ತು ಮೇಲ್ವಿಚಾರಣೆ ಕೋಶವನ್ನು ಸೃಜಿಸಿ ಆದೇಶವನ್ನು ಹೊರಡಿಸಲಾಗಿದೆ. ಮೈಸೂರು ವಲಯ ಕಛೇರಿಯ ಕೆಲಸ ಕಾರ್ಯಗಳನ್ನು ಪ್ರಸ್ತುತ ಬೆಂಗಳೂರಿನ ಕೇಂದ್ರ ಕಛೇರಿಯಲ್ಲಿ ಹಾಲಿ ಲಭ್ಯವಿರುವ ಅಧಿಕಾರಿಗಳ ಹಾಗೂ ಸಿಬ್ಬಂದಿಗಳಿಂದಲೇ ನಿರ್ವಹಿಸಲಾಗುತ್ತಿದೆ. ಈ ಪ್ರಕ್ರಿಯೆಯಿಂದ ಪ್ರಸ್ತುತ ಮಂಡಳಿಗೆ ಹೆಚ್ಚುವರಿಯಾಗಿ ಯಾವುದೇ ಆರ್ಥಿಕ ಹೊರೆಯಾಗುವುದಿಲ್ಲ.

ಮುಂದುವರೆದು, ಮಂಡಳಿಯ ಹಾಗೂ ಸಾರ್ವಜನಿಕ ಹಿತದೃಷ್ಠಿಯಿಂದ ತಾತ್ಕಾಲಿಕವಾಗಿ ಮೂರು ತಿಂಗಳ ಅವಧಿಗೆ ಸೃಜಿಸಲಾದ ಮೈಸೂರು ವಲಯ ಕಛೇರಿ ಹಾಗೂ ವಿನ್ಯಾಸ, ಯೋಜನಾ ಮತ್ತು ಮೇಲ್ವಿಚಾರಣೆ ಕೋಶದ ಮಾಹಿತಿಯನ್ನು ದಿನಾಂಕ: 27–02–2015 ರಂದು ನಡೆದ 259ನೇ ಮಂಡಳಿಯ ಸಭೆಯಲ್ಲಿ ಸಹ ನಿರ್ಣಯಿಸಲಾಗಿದೆ. ಆದ್ದರಿಂದ, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯಲ್ಲಿನ ಮೈಸೂರು ವಲಯ ಕಛೇರಿ ಹಾಗೂ ವಿನ್ಯಾಸ, ಯೋಜನಾ ಮತ್ತು ಮೇಲ್ವಿಚಾರಣೆ ಕೋಶಕ್ಕೆ ತಲಾ ಒಂದರಂತೆ ಒಟ್ಟು ಎರಡು ಮುಖ್ಯ ಅಭಿಯಂತರರ ಹುದ್ದೆಗಳನ್ನು ಸೃಜಿಸಲು ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಅದರಂತೆ, ಪ್ರಸ್ತಾವನೆಯನ್ನು ಸರ್ಕಾರವು ಕೂಲಕಂಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 53 ಯುಡಬ್ಲ್ಯೂಇ 2015, ಬೆಂಗಳೂರು, ದಿನಾಂಕ: 11–09–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯಲ್ಲಿನ ಮುಖ್ಯ ಇಂಜಿನಿಯರ್, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಮೈಸೂರು ವಲಯ ಕಛೇರಿ ಬೆಂಗಳೂರು ಹುದ್ದೆಯನ್ನು ದಿನಾಂಕ: 15–12–2014 ರಿಂದ ಜಾರಿಗೆ ಬರುವಂತೆ ಹಾಗೂ ವಿನ್ಯಾಸ, ಯೋಜನಾ ಮತ್ತು ಮೇಲ್ವಿಚಾರಣೆ ಕೋಶಕ್ಕೆ ಮುಖ್ಯ ಇಂಜಿನಿಯರ್ ಹುದ್ದೆಯನ್ನು ದಿನಾಂಕ: 05–12–2014 ರಿಂದ ಜಾರಿಗೆ ಬರುವಂತೆ ಒಟ್ಟು ಎರಡು ಮುಖ್ಯ ಅಭಿಯಂತರರ ಹುದ್ದೆಗಳನ್ನು ಇದಕ್ಕೆ ತಗಲುವ ವೆಚ್ಚವನ್ನು ಮಂಡಳಿಯ ಸಂಪನ್ಮೂಲದಿಂದಲೇ ಭರಿಸತಕ್ಕದೆಂಬ ಷರತ್ತಿಗೊಳಪಟ್ಟು ಭವಿಷ್ಯಾವರ್ತಿಯಾಗಿ ಸರ್ಕಾರದ ಅನುಮೋದನೆಯನ್ನು ನೀಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 540 ವೆಚ್ಚ–9/2015, ದಿನಾಂಕ: 04–09–2015ರಲ್ಲಿ ಅಭಿಪ್ರಾಯಿಸಿರುವಂತೆ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ. ರಾಜೇಂದ್ರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**PR. 574**

## ಕಂದಾಯ ಸಚಿವಾಲಯ

**ವಿಷಯ:** ಹಾಸನ ಜಿಲ್ಲೆ, ಚನ್ನರಾಯಪಟ್ಟಣ ತಾಲ್ಲೂಕು, ಬಾಗೂರು ಹೋಬಳಿ, ಬಿ. ಕಾಳೇನಹಳ್ಳಿ ಗ್ರಾಮದ ಶ್ರೀ ಲಕ್ಷ್ಮೀದೇವರ ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಗೆ ಸೇರ್ಪಡೆ ಮಾಡುವ ಕುರಿತು.

**ಓದಲಾಗಿದೆ:** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರ ಸಂಖ್ಯೆ: ಎಡಿಎಂ/05/ಸಿಆರ್/54/2014–15, ದಿನಾಂಕ: 30.07.2015.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ದಿನಾಂಕ: 30–07–2015ರ ಪತ್ರದಲ್ಲಿ ಹಾಸನ ಜಿಲ್ಲೆ, ಚನ್ನರಾಯಪಟ್ಟಣ ತಾಲ್ಲೂಕು, ಬಾಗೂರು ಹೋಬಳಿ, ಬಿ. ಕಾಳೇನಹಳ್ಳಿ ಗ್ರಾಮದ ಶ್ರೀ ಲಕ್ಷ್ಮೀದೇವರ ದೇವಾಲಯಕ್ಕೆ ಇನಾಂ ಜಮೀನುಗಳು ಇದ್ದು, ಸದರಿ ಜಮೀನುಗಳು ಸರ್ಕಾರಕ್ಕೆ ವಿಹಿತಗೊಂಡಿರುವುದರಿಂದ ವಾರ್ಷಿಕವಾಗಿ `. 1,33,341–00ಗಳ ತಸ್ಥಿಕ್ ಭತ್ಯೆ ನಿಗಧಿಪಡಿಸಲಾಗಿರುತ್ತದೆ. ಈ ದೇವಾಲಯವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ರ ಸೆಕ್ಷನ್ 23(ಎ)ರನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರ್ಪಡೆ ಮಾಡುವ ಕುರಿತು ರಾಜ್ಯ ಧಾರ್ಮಿಕ ಪರಿಷತ್ತಿನ ದಿನಾಂಕ: 16.06.2015ರ ಸಭೆಯಲ್ಲಿ ನಿರ್ಣಯ ತೆಗೆದುಕೊಳ್ಳಲಾಗಿರುತ್ತದೆ. ಆದುದರಿಂದ ಪ್ರಸ್ತಾಪಿತ ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರ್ಪಡೆಗೊಳಿಸಿ ಆದೇಶ ಹೊರಡಿಸುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 45 ಮುಆಬಿ 2015, ಬೆಂಗಳೂರು, ದಿನಾಂಕ: 07ನೇ ಸೆಪ್ಟೆಂಬರ್, 2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹಾಸನ ಜಿಲ್ಲೆ, ಚನ್ನರಾಯಪಟ್ಟಣ ತಾಲ್ಲೂಕು, ಬಾಗೂರು ಹೋಬಳಿ, ಬಿ. ಕಾಳೇನಹಳ್ಳಿ ಗ್ರಾಮದ ಶ್ರೀ ಲಕ್ಷ್ಮೀದೇವರ ದೇವಾಲಯವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ರ ಸೆಕ್ಷನ್ 23 (ಎ)ರನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಗೆ ಸೇರ್ಪಡೆಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಸ್. ನಾಗರತ್ನಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ. (ಮುಜರಾಯಿ)

PR. 575
SC. 25

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಕರ್ನಾಟಕ ಗಡಿ ರಕ್ಷಣಾ ಆಯೋಗಕ್ಕೆ ಪದನಿಮಿತ್ತ ಸದಸ್ಯರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ರಾಗವಿ 2015, ದಿನಾಂಕ: 22–06–2015.
2. ಸರ್ಕಾರದ ಅಪರ ಕಾರ್ಯದರ್ಶಿ, ಕಾನೂನು ಇಲಾಖೆ, ಇವರ ಸಂಖ್ಯೆ: ಲಾ45 ಎಎಲ್ಎಸ್–1/2015, ದಿನಾಂಕ: 27–06–2015ರ ಪತ್ರ.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರಲ್ಲಿ ಕರ್ನಾಟಕದ ಗಡಿ ರಕ್ಷಣೆಯನ್ನು ಸಮರ್ಪಕವಾಗಿ ನಿರ್ವಹಿಸಲು, ರಾಜ್ಯದ ಹಿತವನ್ನು ಕಾಪಾಡಲು, ಸರ್ವೋಚ್ಚ ನ್ಯಾಯಾಲಯದಲ್ಲಿ ಕರ್ನಾಟಕ ಸರ್ಕಾರದ ಪರವಾಗಿ ವಾದಿಸಲು ಹಿರಿಯ ನ್ಯಾಯವಾದಿಗಳಿಗೆ ಅಗತ್ಯವಿರುವ ಮಾರ್ಗದರ್ಶನ ಒದಗಿಸಲು ಕರ್ನಾಟಕ ಗಡಿ ರಕ್ಷಣಾ ಆಯೋಗವನ್ನು ರಚಿಸಲಾಗಿದೆ. ಕ್ರಮ ಸಂಖ್ಯೆ: (2)ರಲ್ಲಿ ಸರ್ಕಾರದ ಅಪರ ಕಾರ್ಯದರ್ಶಿ, ಕಾನೂನು ಇಲಾಖೆ, ಇವರು ಅಧ್ಯಕ್ಷರು, ಕರ್ನಾಟಕ ಗಡಿ ರಕ್ಷಣಾ ಆಯೋಗ, ಇವರು ಸೂಚಿಸಿರುವಂತೆ ಕೆಲವು ಅಧಿಕಾರಿಗಳನ್ನು ಕರ್ನಾಟಕ ಗಡಿ ರಕ್ಷಣಾ ಆಯೋಗದ ಪದನಿಮಿತ್ತ ಸದಸ್ಯರನ್ನಾಗಿ ನೇಮಿಸುವಂತೆ, ಸರ್ಕಾರದ ಅಪರ ಕಾರ್ಯದರ್ಶಿ, ಕಾನೂನು ಇಲಾಖೆ ಇವರನ್ನು ಈ ಆಯೋಗದ ಕಾರ್ಯದರ್ಶಿಯನ್ನಾಗಿ ನೇಮಿಸುವಂತೆ ಹಾಗೂ ಪ್ರಸ್ತುತ ಸದರಿ ಆಯೋಗದ ಸದಸ್ಯರಾಗಿರುವ ಶ್ರೀ ಕೆ. ಎನ್. ಬೆಂಗೇರಿ, ಇವರನ್ನು ಆಯೋಗದ ಖಾಯಂ ಸದಸ್ಯರನ್ನಾಗಿ ನೇಮಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ: ಸಿಆಸುಇ 6 ರಾಗವಿ 2015, ಬೆಂಗಳೂರು, ದಿನಾಂಕ: 08–07–2015.**

ಈ ಕೆಳಕಂಡ ಅಧಿಕಾರಿಗಳನ್ನು ಕರ್ನಾಟಕ ಗಡಿ ರಕ್ಷಣಾ ಆಯೋಗದ ಪದನಿಮಿತ್ತ ಸದಸ್ಯರನ್ನಾಗಿ ನೇಮಿಸಲಾಗಿದೆ:–

(1) ಅಡ್ವೋಕೇಟ್ ಜನರಲ್ ಆಫ್ ಕರ್ನಾಟಕ, ಬೆಂಗಳೂರು.

(2) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಒಳಾಡಳಿತ ಇಲಾಖೆ.

(3) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

(4) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ.

(5) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

(6) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಾನೂನು ಇಲಾಖೆ.

(7) ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಕನ್ನಡ ಸಂಸ್ಕೃತಿ ಮತ್ತು ವಾರ್ತಾ ಇಲಾಖೆ.

ಮುಂದುವರೆದು ಒಬ್ಬ ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ಸದರಿ ಆಯೋಗದ ಕಾರ್ಯದರ್ಶಿಯನ್ನಾಗಿ ನೇಮಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಭೀಮಾಶಂಕರ ರಾಸೂಲ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ. (ರಾಜಕೀಯ)

**PR. 577**

**SC. 100**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಸರ್ಕಾರದ ವಿಶೇಷ ಕಾರ್ಯದರ್ಶಿ, ಸಿಆಸುಇ. (ಸೇವಾ ನಿಯಮಗಳು) ಇವರಿಗೆ ವಿಷಯಗಳನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1. ದಿನಾಂಕ: 30–06–2014ರ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 360 ಸಅಸೇ 2014.

2. ದಿನಾಂಕ: 22–04–2015ರ ಅಧಿಸೂಚನೆ ಸಂಖ್ಯೆ: ಸಿಆಸುಇ 119 ಸಉಸೇ 2015.

**ಪ್ರಸ್ತಾವನೆ:**

1. ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಅಪರ ಕಾರ್ಯದರ್ಶಿ ವೃಂದದಲ್ಲಿನ ಒಂದು ಹುದ್ದೆಯನ್ನು ವಿಶೇಷ ಕಾರ್ಯದರ್ಶಿ ಹುದ್ದೆಯನ್ನಾಗಿ ಉನ್ನತೀಕರಿಸಲಾಗಿದೆ.

2. ಮೇಲೆ (2)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಸರ್ಕಾರದ ಅಪರ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವಾ ನಿಯಮಗಳು) ಇವರು ಕಾರ್ಯನಿರ್ವಹಿಸುತ್ತಿರುವ ಹುದ್ದೆಯನ್ನು ತಾತ್ಕಾಲಿಕವಾಗಿ ಸರ್ಕಾರದ ವಿಶೇಷ ಕಾರ್ಯದರ್ಶಿ ಹುದ್ದೆಗೆ ಉನ್ನತೀಕರಿಸಿ, ಉನ್ನತಿಕರಿಸಿದ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿ ನೇಮಿಸಲಾಗಿದೆ. ಈ ಹಿನ್ನೆಲೆಯಲ್ಲಿ ಸರ್ಕಾರದ ವಿಶೇಷ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವಾ ನಿಯಮಗಳು) ಇವರಿಗೆ ವಿಷಯವನ್ನು ಹಂಚಿಕೆ ಮಾಡುವ ಬಗ್ಗೆ ಸರ್ಕಾರ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 9 ಎಆರ್‌ಬಿ 2015 (2), ದಿನಾಂಕ: 05.09.2015.**

ಸರ್ಕಾರದ ವಿಶೇಷ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವಾ ನಿಯಮಗಳು) ಇವರು ಹಾಲಿ ನಿರ್ವಹಿಸುತ್ತಿರುವ ವಿಷಯಗಳ ಜೊತೆಗೆ ಈ ಕೆಳಕಂಡ ವಿಷಯಗಳನ್ನು ನಿರ್ವಹಿಸಲು ಅಧಿಕಾರ ಪ್ರತ್ಯಾಯೋಜಿಸಲಾಗಿದೆ.

1. ಮಾನ್ಯತೆ ಹೊಂದಿರದ ಆಸ್ಪತ್ರೆಗಳಲ್ಲಿ ಪಡೆದ ಚಿಕಿತ್ಸೆಗೆ ತಗುಲಿದ ವೆಚ್ಚವನ್ನು ಗರಿಷ್ಠ `. 2,00,000/– ದಿಂದ `. 3,00,000/–ಗಳವರೆಗೆ ನಿರ್ದೇಶಕರು, ಆರೋಗ್ಯ ಮತು ಕುಟುಂಬ ಕಲ್ಯಾಣ ಇಲಾಖೆ ಇವರ ಅಭಿಪ್ರಾಯದೊಂದಿಗೆ ಮರುಪಾವತಿಸುವುದು.
2. ವಿವಿಧ ವೃಂದದ ಹುದ್ದೆಗಳ ತಾತ್ಕಾಲಿಕ ಜ್ಯೇಷ್ಠತಾ ಪಟ್ಟಿಯನ್ನು ಪ್ರಕಟಿಸುವುದು.
3. ಅನುಕಂಪದ ಆಧಾರದ ನೇಮಕಾತಿ ಪ್ರಸ್ತಾವನೆಗಳನ್ನು ತಿರಸ್ಕರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ. ಮಂಗಳ ಬಿ. ಎಸ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ. (ಸೇವಾ ನಿಯಮಗಳು–1)

**PR. 578**

**SC. 100**

## ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವಾಲಯ

**ವಿಷಯ:** 2011ರ ಕರ್ನಾಟಕ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರನ್ನು ವಿಲೀನಗೊಳಿಸುವ ಅಧಿನಿಯಮದ ಉಪಬಂಧಗಳಲ್ಲಿ ನಿಗಧಿಪಡಿಸಿರುವ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1. ದಿನಾಂಕ: 06.04.2011ರ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 22 ಶಾಸನ 2011.

2. ಸರ್ಕಾರದ ದಿನಾಂಕ: 27/08/2012ರ ಆದೇಶ ಸಂಖ್ಯೆ: ಇಡಿ 48 ಟಿವಿಇ 2012.
3. ಸರ್ಕಾರದ ದಿನಾಂಕ: 08/10/2013ರ ಆದೇಶ ಸಂಖ್ಯೆ: ಇಡಿ 161 ಟಿವಿಇ 2013.
4. ಸರ್ಕಾರದ ದಿನಾಂಕ: 25/06/2014ರ ಆದೇಶ ಸಂಖ್ಯೆ: ಇಡಿ 161 ಟಿವಿಇ 2013.
5. ನಿರ್ದೇಶಕರು, ವೃತ್ತಿ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು, ಇವರ ಪತ್ರ ಸಂಖ್ಯೆ: ವೃಶಿನಿ/ವಿಲೀನ. ಪ್ರಕ್ರಿಯೆ/ಅ.ವಿ.ಬ 805/2015, ದಿನಾಂಕ: 07/03/2015.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಕರ್ನಾಟಕ ರಾಜ್ಯದಲ್ಲಿನ ಪದವಿಪೂರ್ವ ಶಿಕ್ಷಣದಲ್ಲಿರುವ ವೃತ್ತಿ ಆಧಾರಿತ ಕೋರ್ಸುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರನ್ನು ವಿಲೀನಗೊಳಿಸುವುದಕ್ಕೆ ಸಂಬಂಧಿಸಿದಂತೆ, ಉಪಬಂಧ ಕಲ್ಪಿಸಿ ಅಧಿನಿಯಮ ಹೊರಡಿಸಲಾಗಿದೆ. ಸದರಿ ಅಧಿನಿಯಮದ 4ನೇ ಪ್ರಕರಣದ (4)ನೇ ಉಪ ಪ್ರಕರಣದಲ್ಲಿ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಒಂದು ವರ್ಷದ ಒಳಗೆ ಪ್ರಕ್ರಿಯೆ ಪೂರ್ಣಗೊಳಿಸಲು ಅವಕಾಶ ಕಲ್ಪಿಸಲಾಗಿದ್ದು, ಸದರಿ ಅಧಿನಿಯಮದ ಅವಧಿಯು ದಿನಾಂಕ: 05–04–2012ಕ್ಕೆ ಅಂತ್ಯಗೊಂಡಿರುತ್ತದೆ.

ಪ್ರಸ್ತುತ ಸರ್ಕಾರಿ ಸಂಸ್ಥೆ/ಕಾಲೇಜುಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅರೆಕಾಲಿಕ ಬೋಧಕ/ಬೋಧಕೇತರ ಸಿಬ್ಬಂದಿಯನ್ನು ವಿವಿಧ ಇಲಾಖೆಗಳಿಗೆ ನಿಯೋಜಿಸುವ ಸಂಬಂಧವಾಗಿ ದಿನಾಂಕ: 04/03/2012 ಹಾಗೂ 05/03/2012 ರಂದು ಕೌನ್ಸಿಲಿಂಗ್ ನಡೆಸಲಾಗಿರುತ್ತದೆ. ಆದರೆ ಖಾಸಗಿ ವಿಲೀನ ಪ್ರಕ್ರಿಯೆ

ಸಮಿತಿಯ ಅಧ್ಯಕ್ಷರು ಸಲ್ಲಿಸಿರುವ ವರದಿಯಲ್ಲಿ ಖಾಸಗಿ ಅನುದಾನಿತ ಸಂಸ್ಥೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅರೆಕಾಲಿಕ ಸಿಬ್ಬಂದಿಗಳನ್ನು ಅಧಿನಿಯಮದಂತೆ ವಿವಿಧ ಖಾಸಗಿ ಅನುದಾನಿತ ಸಂಸ್ಥೆಗೆ ನಿಯೋಜಿಸಲು ಹುದ್ದೆಗಳ ಕೊರತೆ ಉಂಟಾಗಿರುವುದರಿಂದ ಸದರಿ ಸಿಬ್ಬಂದಿಗಳನ್ನು ನಿಯೋಜಿಸಲು ವಿಳಂಬವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ದಿನಾಂಕ: 06.04.2011ರ ಅಧಿಸೂಚನೆಯಲ್ಲಿ ಸೂಚಿಸಿರುವ ಕಾಲಮಿತಿಯನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ: 27/08/2012ರ ಆದೇಶದನ್ವಯ ದಿನಾಂಕ: 06/04/2012 ರಿಂದ ಮತ್ತೆ 06 ತಿಂಗಳು ಹಾಗೂ ಮೇಲೆ (3)ರಲ್ಲಿ ಓದಲಾದ ದಿನಾಂಕ: 08/10/2013ರ ಆದೇಶದಲ್ಲಿ ದಿನಾಂಕ: 06/10/2012 ರಿಂದ 31/12/2013ರ ವರೆಗೆ (ಮತ್ತೆ 01 ವರ್ಷ 03 ತಿಂಗಳ ಅವಧಿಗೆ) ಕಾಲಾವಧಿಯನ್ನು ವಿಸ್ತರಿಸಲಾಗಿದೆ. ಹಾಗೂ ಮೇಲೆ (4)ರಲ್ಲಿ ಓದಲಾದ ದಿನಾಂಕ: 25/06/2014ರ ಆದೇಶದಲ್ಲಿ ದಿನಾಂಕ: 01/01/2014 ರಿಂದ 31/03/2015ರ ವರೆಗೆ (ಮತ್ತೆ 01 ವರ್ಷ 2 ತಿಂಗಳ ಅವಧಿಗೆ) ಕಾಲಾವಧಿಯನ್ನು ವಿಸ್ತರಿಸಲಾಗಿದೆ.

ಮೇಲೆ ಓದಲಾದ (5)ರ ಪತ್ರದಲ್ಲಿ 1437 ಸಿಬ್ಬಂದಿಗಳ ವಿಲೀನ ಪ್ರಕ್ರಿಯೆಯು ಭಾಗಶ: ಪೂರ್ಣಗೊಂಡಿದ್ದು ಬಾಕಿ ಉಳಿದಿರುವ ಅಂದಾಜು 231 ಸಿಬ್ಬಂದಿಯನ್ನು ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ಲಭ್ಯವಾಗಿರುವ ದ್ವಿತೀಯ ದರ್ಜೆ ಸಹಾಯಕ ಹುದ್ದೆಗಳಲ್ಲಿ ವಿಲೀನಗೊಳಿಸುವ ಬಗ್ಗೆ ಕ್ರಮ ಕೈಗೊಳ್ಳಲು ಆರ್ಥಿಕ ಇಲಾಖೆಯ ಅನುಮೋದನೆ ಪಡೆಯಬೇಕಾಗಿರುವುದರಿಂದ ಮಾರ್ಚ್ 31ಕ್ಕೆ ಅಂತ್ಯಗೊಳ್ಳುತ್ತಿರುವ ವಿಧೇಯಕದ ಕಾರ್ಯಾನುಷ್ಠಾನ ಅವಧಿಯನ್ನು 06 ತಿಂಗಳು ವಿಸ್ತರಿಸುವಂತೆ ಕೋರಿರುತ್ತಾರೆ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 48 ಟಿವಿಇ 2015, ಬೆಂಗಳೂರು, ದಿನಾಂಕ: 12-05-2015.**

2011ರ ಕರ್ನಾಟಕ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರನ್ನು ವಿಲೀನಗೊಳಿಸುವ ಅಧಿನಿಯಮದ 4ನೇ ಪ್ರಕರಣದ 4ನೇ ಉಪ ಪ್ರಕರಣದ ಪ್ರಕಾರ ಬಾಕಿ ಉಳಿದಿರುವ 231 ಸಿಬ್ಬಂದಿಯನ್ನು ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ಲಭ್ಯವಾಗಿರುವ ದ್ವಿತೀಯ ದರ್ಜೆ ಸಹಾಯಕ ಹುದ್ದೆಗಳಲ್ಲಿ ವಿಲೀನಗೊಳಿಸುವ ಪ್ರಕ್ರಿಯೆ ಪೂರ್ಣಗೊಳಿಸಬೇಕಾಗಿರುವುದರಿಂದ, ಪ್ರಕ್ರಿಯೆಯನ್ನು ಪೂರ್ಣಗೊಳಿಸಲು ದಿನಾಂಕ: 01-04-2015 ರಿಂದ 31-09-2015ರವರೆಗೆ ಕಾಲಾವಧಿಯನ್ನು ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ತಾರಾ,**

ಸರ್ಕಾರದ ಅಧೀನ ಕಾರ್ಯದರ್ಶಿ, (ಸಾಮಾನ್ಯ)

ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಇಲಾಖೆ.

**PR. 580**
**SC. 100**

## ಒಳಾಡಳಿತ ಸಚಿವಾಲಯ

**ವಿಷಯ:** ದಿನಾಂಕ: 10/06/2008 ರಂದು ಹಾವೇರಿಯಲ್ಲಿ ನಡೆದ ಗೋಲಿಬಾರ್ ನಲ್ಲಿ ಮೃತಪಟ್ಟ ಶ್ರೀ ಸಿದ್ದಲಿಂಗಪ್ಪ ಚೂರಿ ಇವರ ಮಕ್ಕಳ ವಿದ್ಯಾಭ್ಯಾಸಕ್ಕೆ ತಗಲುವ ವೆಚ್ಚವನ್ನು ಭರಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 370 ಎಸ್‌ಎಸ್‌ಟಿ 2008, ಬೆಂಗಳೂರು, ದಿನಾಂಕ: 16/06/2008.
2. ಶ್ರೀಮತಿ ಕುಸುಮಾ ಕೋಂ ಸಿದ್ದಲಿಂಗಪ್ಪ ಚೂರಿ, ಸಾ: ಹಾವೇರಿ ಇವರು ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ, ಇವರಿಗೆ ಸಲ್ಲಿಸಿರುವ ಮನವಿ ದಿನಾಂಕ: 01/10/2012, 20/05/2013 & ಸರ್ಕಾರಕ್ಕೆ ಸಲ್ಲಿಸಿರುವ ಮನವಿ ದಿನಾಂಕ: 07/08/2014.
3. ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ ಇವರ ಪತ್ರ ಸಂಖ್ಯೆ: ಎಂಎಜಿ/ವಹಿ/221/2012-13, ದಿನಾಂಕ: 20/10/2012.
4. ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ ಇವರ ಪತ್ರ ಸಂಖ್ಯೆ: ಎಂಎಜಿ/ವಹಿ/221/2012-13, ದಿನಾಂಕ: 14/06/2013.
5. ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ ಇವರ ಪತ್ರ ಸಂಖ್ಯೆ: ಎಂಎಜಿ/ವಹಿ/221/2012-13, ದಿನಾಂಕ: 09/04/2015.

**ಪ್ರಸ್ತಾವನೆ:**

ದಿನಾಂಕ: 10/06/2008ರಂದು ಹಾವೇರಿಯಲ್ಲಿ ನಡೆದ ಗೋಲಿಬಾರ್‌ನಲ್ಲಿ ಮೃತಪಟ್ಟ ಶ್ರೀ ಸಿದ್ದಲಿಂಗಪ್ಪ ಚೂರಿ ಇವರ ಪತ್ನಿಯಾದ ಶ್ರೀಮತಿ ಕುಸುಮಾ ಕೋಂ. ಸಿದ್ದಲಿಂಗಪ್ಪ ಚೂರಿರವರು ತಮ್ಮ ಮಗನಾದ ಕುಮಾರ: ಕಿರಣ ಇವರು ಮಹಾವೀರ ಪ್ರಥಮ ದರ್ಜೆ ಕಾಲೇಜು, ಮೂಡಬಿದರಿ, ದಕ್ಷಿಣ ಕನ್ನಡ ಜಿಲ್ಲೆ ಇಲ್ಲಿ ವ್ಯಾಸಂಗ ಮಾಡುತ್ತಿದ್ದು, 2012-13ನೇ ಸಾಲಿಗೆ `. 31,076/-ಗಳ ವ್ಯಾಸಂಗ ವೆಚ್ಚ ಮರುಪಾವತಿಯಾಗಿರುವುದಿಲ್ಲವೆಂದು ಹಾಗೂ 2013-14ನೇ ಸಾಲಿಗೆ `. 40,000/-ಗಳನ್ನು ಮರುಪಾವತಿ ಮಾಡುವಂತೆ ಮೇಲೆ ಓದಲಾದ (2)ರಲ್ಲಿ ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ ಇವರನ್ನು ಕೋರಿರುತ್ತಾರೆ. ಉಲ್ಲೇಖ (5)ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ ಇವರು ದಿವಂಗತ ಸಿದ್ದಲಿಂಗಪ್ಪ ಚೂರಿ ಇವರ ಪತ್ನಿಯಾದ ಶ್ರೀಮತಿ ಕುಸುಮಾ ಕೋಂ ಸಿದ್ಧಲಿಂಗಪ್ಪ ಚೂರಿ, ಸಾಕೀನ: ಹಾವೇರಿ ಇವರ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ತಗುಲಿದ ವೆಚ್ಚ ರೂ. 87,042/-ಗಳನ್ನು ಮಂಜೂರು ಮಾಡಲು ಕೋರಿರುತ್ತಾರೆ. ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಮೃತರ ಪುತ್ರ ಚಿರಂಜೀವಿ ಕಿರಣ್ (12ವರ್ಷ) ಈತನು 7ನೇ ತರಗತಿಯಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದು ಹಾಗೂ ಕುಮಾರಿ ಕಾವ್ಯ (7ವರ್ಷ) ಇವರು 2ನೇ ತರಗತಿಯಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದು, ಇವರ ಪದವಿಮಟ್ಟದ ವಿದ್ಯಾಭ್ಯಾಸಕ್ಕಾಗಿ ತಗಲುವ ವೆಚ್ಚವನ್ನು ಸರ್ಕಾರವೇ ಭರಿಸುವುದೆಂದು ಆದೇಶಿಸಲಾಗಿದೆ. ಪ್ರಸ್ತಾವನೆಯಲ್ಲಿನ ಕೋರಿಕೆಯನ್ನು ಕೂಲಂಕಷವಾಗಿ ಪರಿಗಣಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 06 ಸಿಆರ್‌ಆರ್ 2015, ಬೆಂಗಳೂರು, ದಿನಾಂಕ: 21/09/2015.**

ದಿನಾಂಕ: 10/06/2008ರಂದು ಹಾವೇರಿಯಲ್ಲಿ ನಡೆದ ಗೋಲಿಬಾರ್‌ನಲ್ಲಿ ಮೃತಪಟ್ಟ ಶ್ರೀ ಸಿದ್ದಲಿಂಗಪ್ಪ ಚೂರಿ ಇವರ ಪತ್ನಿಯಾದ ಶ್ರೀಮತಿ ಕುಸುಮಾ ಕೋಂ ಸಿದ್ದಲಿಂಗಪ್ಪ ಚೂರಿರವರ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ತಗುಲಿದ ಒಟ್ಟು ವೆಚ್ಚ `. 87,042/-(ರೂಪಾಯಿ ಎಂಬತ್ತೇಳು ಸಾವಿರದ ನಲವತ್ತೆರಡು ಮಾತ್ರ) ಗಳನ್ನು ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ, ಇವರ ಮುಖಾಂತರ ಬಿಡುಗಡೆಗೊಳಿಸಿ ಆದೇಶಿಸಿದೆ. ಈ ಅನುದಾನವನ್ನು ಲೆಕ್ಕ ಶೀರ್ಷಿಕೆ "2235-60-200-3-01-100" ಅಡಿಯಲ್ಲಿ ಭರಿಸತಕ್ಕದ್ದು.

ಈ ಅನುದಾನವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸಿ, ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ.ಎಸ್. ಜೋಗೋಜೆ,**
ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರ)
ಒಳಾಡಳಿತ ಇಲಾಖೆ. (ಕಾನೂನು ಮತ್ತು ಸುವ್ಯವಸ್ಥೆ)

**PR. 582**
**SC.50**

## TRANSPORT SECRETARIAT

## PROCEEDINGS OF THE GOVERNMENT OF KARNATAKA

**Sub:** Proceedures for effecting NPS deductions of Government employees and AIS Officers working on Foreign Service who come under the purview of NPS architecture set up by the PFRDA.

**Ref:** 1. GO. No. FD (Spl) 219 PEN 2012, Dated: 30/01/2014.

2. Letter from the Managing Director, KSRTC Vide: KST/CO/ACC/GADT: 2068/2015-16/07.08.2015.

**PREAMBLE:**

The Government of Karnataka vide order no. FD (Spl) 219 PEN 2012, Dated: 30/01/2014 has directed the organizations that have Govt employees and AIS Officers working on foreign Service and who come under the purview of NPS to adopt the NPS architecture set up by the PFRDA for effecting NPS deductions and other related activities of such employees.

**Government Order No. SARIE 24 SASAMSE, Dated: 18.09.2015.**

Government of Karnataka are pleased to designate the Chief Accounts Officer, KSRTC Central Office as the Non Treasury Pay & Accounts Officer (PAO) and DDO under the NPS architecture set up by the PFRDA for effecting NPS deductions of Govt employees and AIS Officers working on Foreign Service in KSRTC.

This order is issued as per the concurrence of Internal financial advisers vide endorsement No. OSAE 4098 IFA 2015, dated: 08-09-2015.

By order and in the name of the Governor of Karnataka,
**K. Beeresh,**
Under Secretary to Government,
Transport Department.

**PR. 587**
**SC.50**

## ಕಂದಾಯ ಸಚಿವಾಲಯ

**ವಿಷಯ:** ಉಡುಪಿ ಜಿಲ್ಲೆ, ಕುಂದಾಪುರ ತಾಲ್ಲೂಕು, ಚಿಕ್ಕನಸಾಲ್ ರಸ್ತೆಯ ಶ್ರೀ ಮೈಲಾರೇಶ್ವರ ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಗೆ ಸೇರ್ಪಡೆ ಮಾಡುವ ಕುರಿತು.

**ಓದಲಾಗಿದೆ:** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರ ಸಂಖ್ಯೆ: ಎಡಿಎಂ/05/ಸಿಆರ್/42/2013–14, ದಿನಾಂಕ: 13.07.2015.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ದಿನಾಂಕ: 13.07.2015ರ ಪತ್ರದಲ್ಲಿ ಉಡುಪಿ ಜಿಲ್ಲೆ, ಕುಂದಾಪುರ ತಾಲ್ಲೂಕು, ಶ್ರೀ ಮೈಲಾರೇಶ್ವರ ದೇವಾಲಯವು ಕುಂದಾಪುರ ಪುರಸಭೆ ವ್ಯಾಪ್ತಿಯಲ್ಲಿ ಸಾರ್ವಜನಿಕ ದೇವಾಲಯವಾಗಿರುತ್ತದೆ. ಈ ದೇವಾಲಯಕ್ಕೆ ವಾರ್ಷಿಕವಾಗಿ `. 24,000–00 ತಸ್ಥೀಕ್ ನೀಡಲಾಗುತ್ತಿದೆ. ಈ ಕುರಿತು ಸಹಾಯಕ ಆಯುಕ್ತರು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾಧಾಯ ದತ್ತಿಗಳ ಇಲಾಖೆ, ಉಡುಪಿ, ಇವರ ದಿನಾಂಕ: 22.05.2014ರ ವರದಿಯಲ್ಲಿ ಉಡುಪಿ ಜಿಲ್ಲೆ, ಕುಂದಾಪುರ ತಾಲ್ಲೂಕು, ಚಿಕ್ಕನ್ ಸಾಲ್ ರಸ್ತೆಯಲ್ಲಿರುವ ಶ್ರೀ ಮೈಲಾರೇಶ್ವರ ದೇವಾಲಯ ಮತ್ತು ಶ್ರೀ ಮೈಲಾರ ಮಠ ವಿಶ್ವೇಶ್ವರ ದೇವಾಲಯ ಈ ಎರಡೂ ಹೆಸರಿನ ಧಾರ್ಮಿಕ ಸಂಸ್ಥೆ ಒಂದೇ ಆಗಿರುತ್ತದೆ ಎಂದು ತಿಳಿಸಿರುತ್ತಾರೆ. ಸದರಿ ದೇವಸ್ಥಾನವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ರ ಸೆಕ್ಷನ್ 23ರನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರ್ಪಡೆ ಮಾಡುವ ಕುರಿತು ರಾಜ್ಯ ಧಾರ್ಮಿಕ ಪರಿಷತ್ತಿನ ದಿನಾಂಕ: 01–01–2015ರ ಸಭೆಯಲ್ಲಿ ನಿರ್ಣಯ ತೆಗೆದುಕೊಳ್ಳಲಾಗಿರುತ್ತದೆ. ಆದುದರಿಂದ ಪ್ರಸ್ತಾಪಿತ ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರ್ಪಡೆಗೊಳಿಸಿ ಆದೇಶ ಹೊರಡಿಸುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 43 ಮುಆಬಿ 2015, ಬೆಂಗಳೂರು, ದಿನಾಂಕ: 21ನೇ ಸೆಪ್ಟೆಂಬರ್, 2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಉಡುಪಿ ಜಿಲ್ಲೆ, ಕುಂದಾಪುರ ತಾಲ್ಲೂಕು, ಚಿಕ್ಕನಸಾಲ್ ರಸ್ತೆಯ ಶ್ರೀ ಮೈಲಾರೇಶ್ವರ ದೇವಾಲಯವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ರ ಸೆಕ್ಷನ್ 23ರನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಗೆ ಸೇರ್ಪಡೆಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಎಸ್. ನಾಗರತ್ನಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ. (ಮುಜರಾಯಿ)

**PR. 588**

**SC.25**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಸರ್ಕಾರದ ವಿಶೇಷ ಕಾರ್ಯದರ್ಶಿ, ಸಿಆಸುಇ ಇವರಿಗೆ ವಿಷಯಗಳನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1. ದಿನಾಂಕ: 22–03–2012ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 325 ಆಸೇಇ 2009.

2. ದಿನಾಂಕ: 27–06–2012ರ ಸರ್ಕಾರಿ ಆದೇಶ ಸಂಖ್ಯೆ: ಡಿಸಿಎ 4 ಎಆರ್‌ಬಿ 2012.

3. ದಿನಾಂಕ: 11–02–2013ರ ಸರ್ಕಾರಿ ಆದೇಶ ಸಂಖ್ಯೆ: ಡಿಸಿಎ 02 ಎಆರ್‌ಬಿ 2013.

**ಪ್ರಸ್ತಾವನೆ:**

1. ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕೆಎಎಸ್ ಸೀನಿಯರ್ ಸೂಪರ್ ಟೈಂ ಸ್ಕೇಲ್ ವೃಂದವನ್ನು ಹೊಸದಾಗಿ ರಚಿಸಿ `. 28275–39900 ವೇತನ ಶ್ರೇಣಿಯಲ್ಲಿ ಐದು ಹುದ್ದೆಗಳನ್ನು ಸೃಜಿಸಲಾಗಿರುತ್ತದೆ. ಹೊಸದಾಗಿ ಸೃಜಿಸಲಾದ ಈ ಐದು ಹುದ್ದೆಗಳಲ್ಲಿ ಒಂದು ಹುದ್ದೆಯನ್ನು ಸರ್ಕಾರದ ವಿಶೇಷ ಕಾರ್ಯದರ್ಶಿ, ಸಿಆಸುಇ ಎಂದು ಗುರುತಿಸಲಾಗಿದೆ.

2. ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರದ ವಿಶೇಷ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ಇವರಿಗೆ ಸರ್ಕಾರದ ನೀತಿ ನಿರ್ಣಗಳಿಗೆ ಸಂಬಂಧಿಸಿದ ವಿಷಯಗಳನ್ನು ಮತ್ತು ಶಾಸನಬದ್ಧ ಅಧಿಕಾರಗಳನ್ನು ಚಲಾಯಿಸುವ ಪ್ರಕರಣಗಳನ್ನು ಹೊರತುಪಡಿಸಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆಡಳಿತ, ಸಿಬ್ಬಂದಿ ಮತ್ತು ಕಾರ್ಯಕಾರಿ ವಿಭಾಗಗಳ ವಿಷಯಗಳನ್ನು ಕರ್ನಾಟಕ ಸರ್ಕಾರ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು, 1977ರ ನಿಯಮ 9ರನ್ವಯ ಹಂಚಿಕೆ ಮಾಡಲಾಗಿರುತ್ತದೆ.

3. ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರದ ವಿಶೇಷ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ಇವರಿಗೆ ಹಂಚಿಕೆ ಮಾಡಿರುವ ವಿಷಯಗಳ ಕುರಿತಂತೆ ಉಲ್ಲೇಖಿತ (2) ದಿನಾಂಕ: 27.06.2012ರ ಸರ್ಕಾರಿ ಆದೇಶವನ್ನು ಭಾಗಶ: ಮಾರ್ಪಡಿಸಲಾಗಿದೆ.

4. ಸರ್ಕಾರದ ವಿಶೇಷ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಇವರಿಗೆ ವಿಷಯಗಳನ್ನು ಹಂಚಿಕೆ ಮಾಡುವ ಬಗ್ಗೆ ಸರ್ಕಾರ ಪುನರ್ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 9 ಎಆರ್‌ಬಿ 2015 (1), ದಿನಾಂಕ: 05.09.2015.**

ಸರ್ಕಾರದ ವಿಶೇಷ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ಇವರಿಗೆ ಹಾಲಿ ನಿರ್ವಹಿಸುತ್ತಿರುವ ವಿಷಯಗಳ ಜೊತೆಗೆ ಈ ಕೆಳಕಂಡ ವಿಷಯಗಳನ್ನು ಸಹ ಹಂಚಿಕೆ ಮಾಡಿ ನಿರ್ವಹಿಸಲು ಅಧಿಕಾರ ಪ್ರತ್ಯಾಯೋಜಿಸಲಾಗಿದೆ.

ಅ. ಸರ್ಕಾರದ ವಿಶೇಷ ಕಾರ್ಯದರ್ಶಿಯವರ ಅಧಿಕಾರ ವ್ಯಾಪ್ತಿಗೆ ಒಳಪಟ್ಟಿರುವ ಸಚಿವಾಲಯ ಸಿಬ್ಬಂದಿಗಳಿಗೆ ಸಂಬಂಧಿಸಿದಂತೆ, ಪಾಸ್ ಪೋರ್ಟ್ ಪಡೆಯಲು ನಿರಾಕ್ಷೇಪಣ ಪತ್ರ ನೀಡುವುದು.

1. ಮಾನ್ಯತೆ ಹೊಂದಿರುವ ಆಸ್ಪತ್ರೆಗಳಲ್ಲಿ ಪಡೆದ ಚಿಕಿತ್ಸೆಗೆ ತಗುಲಿದ ವೆಚ್ಚವನ್ನು ಗರಿಷ್ಠ `.2,00,000/– ಗಳ ವರೆಗೆ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಇವರ ಅಭಿಪ್ರಾಯದೊಂದಿಗೆ ನಿಯಮಾನುಸಾರ ಮರುಪಾವತಿಸುವುದು.
2. ವಿವಿಧ ವೃಂದದ ಹುದ್ದೆಗಳ ತಾತ್ಕಾಲಿಕ ಜ್ಯೇಷ್ಠತಾ ಪಟ್ಟಿಯನ್ನು ಪ್ರಕಟಿಸುವುದು.
3. ಸಚಿವಾಲಯದ ಇಲಾಖೆಗಳಿಗೆ ಸ್ಥಳಾವಕಾಶದ ಕೋರಿಕೆ ತಿರಸ್ಕರಿಸಲು ಪ್ರಕರಣಗಳು.
4. ನ್ಯಾಯಾಲಯ ಪ್ರಕರಣಗಳಿಗೆ ಸಂಬಂಧಿಸಿದಂತೆ ಕಂಡಿಕೆವಾರು ಉತ್ತರ/ಆಕ್ಷೇಪಣಾ ಹೇಳಿಕೆ ಸಲ್ಲಿಸುವುದು.
5. ವಿದೇಶಗಳಿಗೆ ಖಾಸಗಿ ಪ್ರಯಾಣಕ್ಕೆ ಅನುಮತಿ ನೀಡುವುದು. (ಹಿರಿಯ ಸಹಾಯಕ ವೃಂದದವರೆಗೆ)
6. ಸರ್ಕಾರಿ ಕರ್ತವ್ಯ ಸಮರ್ಪಕವಾಗಿ ನಿರ್ವಹಿಸುವುದರ ಜೊತೆಗೆ ಉನ್ನತ ವಿದ್ಯಾಭ್ಯಾಸಕ್ಕೆ ಅನುಮತಿ ನೀಡುವುದು./(ಹಿರಿಯ ಸಹಾಯಕ ವೃಂದದವರೆಗೆ)
7. ಇತರೆ ಇಲಾಖೆ/ಸೇವೆಗಳಿಗೆ ನಿಯೋಜನೆಯನ್ನು 2ನೇ ವರ್ಷದಿಂದ 5 ವರ್ಷಗಳವರೆಗೆ ವಿಸ್ತರಿಸುವುದು. (ಹಿರಿಯ ಸಹಾಯಕ ವೃಂದದವರೆಗೆ)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ. ಮಂಗಳ ಜಿ.ಎಸ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ. (ಸೇವಾ ನಿಯಮಗಳು–1)

**PR. 594**

**SC.100**

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ**

**ವಿಷಯ:** ಬಳ್ಳಾರಿ ತಾಲ್ಲೂಕಿನ ಅಂಕೋಲಾ–ಜೋಳದರಾಶಿ ರಸ್ತೆಯಲ್ಲಿ (ರಾಜ್ಯ ಹೆದ್ದಾರಿ–42) ಹಗರಿ ಕೂಡು ರಸ್ತೆ ಸೇತುವೆಯು ದುಸ್ಥಿತಿಯಲ್ಲಿದ್ದು, ಅದನ್ನು ಅನುಪಯುಕ್ತವೆಂದು ಘೋಷಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು, (ಉತ್ತರ), ಧಾರವಾಡ, ಇವರ ಪತ್ರ ಸಂಖ್ಯೆ: ಮುಇಂ (ಉ) ತಾಂಸ.3/ಸ ಇ.1/ಬವಿ/2014–15–09618, ದಿನಾಂಕ: 14.01.2015.

**ಪ್ರಸ್ತಾವನೆ:**

ಮೇಲೆ ಓದಲಾದ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು, (ಉತ್ತರ), ಧಾರವಾಡ, ರವರ ಪತ್ರದಲ್ಲಿ, ಬಳ್ಳಾರಿ ತಾಲ್ಲೂಕಿನ ಅಂಕೋಲಾ–ಜೋಳದರಾಶಿ ರಸ್ತೆಯಲ್ಲಿ (ರಾಜ್ಯ ಹೆದ್ದಾರಿ–42) ಹಗರಿ ನದಿಗೆ ಅಡ್ಡಲಾಗಿ ನಿರ್ಮಿಸಲಾಗಿದ್ದ ಸೇತುವೆಯು ದುಸ್ಥಿತಿಯಲ್ಲಿದ್ದು, ಈಗಾಗಲೇ ಸಂಚಾರ ಸ್ಥಗಿತಗೊಳಿಸಿರುವುದರಿಂದ, ಕರ್ನಾಟಕ ಹೈವೇಸ್ ಆಕ್ಟ್–1964ರ ಸೆಕ್ಷನ್ 52 ರನ್ವಯ ಅಗತ್ಯ ಕ್ರಮ ಜರುಗಿಸಿ, ಸದರಿ ರಸ್ತೆಯನ್ನು "ಅನುಪಯುಕ್ತ, ಎಂದು ಘೋಷಿಸಲು ಪತ್ರಿಕಾ ಪ್ರಕಟಣೆ ಹೊರಡಿಸಿ, ಸಾರ್ವಜನಿಕರಿಂದ ಆಕ್ಷೇಪಣೆಗಳನ್ನು ಸ್ವೀಕರಿಸಲಾಗಿರುತ್ತದೆ. ಈ ಕುರಿತು ಶ್ರೀ ಎ.ಎಸ್. ಮರಿದೇವಯ್ಯ ರವರು ಆಕ್ಷೇಪಣೆ ಸಲ್ಲಿಸಿದ್ದುದರಿಂದ, ಅಧೀಕ್ಷಕ ಇಂಜಿನಿಯರ್, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ವೃತ್ತ, ಬಳ್ಳಾರಿ ವೃತ್ತ ರವರು ದಿನಾಂಕ: 21.06.2013ರಂದು ಸದರಿ ಸೇತುವೆಯ ಪರಿವೀಕ್ಷಣೆ ನಡೆಸಿ, ಅದರ ತೊಲೆಗಳು ತುಕ್ಕು ಹಿಡಿದಿರುವುದಾಗಿ ಹಾಗೂ ಸಂಚಾರಕ್ಕೆ ಯೊಗ್ಯವಾಗಿರುವುದಿಲ್ಲವೆಂದು ಅಭಿಪ್ರಾಯಪಟ್ಟಿರುತ್ತಾರೆಂದು ತಿಳಿಸಿ, ಪ್ರಸ್ತಾಪಿತ ಸೇತುವೆಯನ್ನು ಕರ್ನಾಟಕ ಹೈವೈಸ್ ಆಕ್ಟ್–1964ರ ಸೆಕ್ಷನ್ 52(5)ರನ್ವಯ "ಅನುಪಯುಕ್ತ" ಎಂದು ಘೋಷಿಸುವಂತೆ ಕೋರಿರುತ್ತಾರೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು, (ಉತ್ತರ), ಧಾರವಾಡ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 107 ಸಿಬಿಆರ್ 2015, ಬೆಂಗಳೂರು, ದಿನಾಂಕ: 11.08.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬಳ್ಳಾರಿ ತಾಲ್ಲೂಕಿನ ಅಂಕೋಲಾ–ಜೋಳದರಾಶಿ ರಸ್ತೆಯಲ್ಲಿ (ರಾಜ್ಯ ಹೆದ್ದಾರಿ–42) ಹಗರಿ ನದಿಗೆ ಅಡ್ಡಲಾಗಿ ನಿರ್ಮಿಸಲಾಗಿದ್ದ ಸೇತುವೆಯು ದುಸ್ಥಿತಿ/ಶಿಥಿಲಾವಸ್ತೆಯಲ್ಲಿರುವುದರಿಂದ, ಕರ್ನಾಟಕ ಹೈವೇಸ್ ಆಕ್ಟ್–1964ರ ಸೆಕ್ಷನ್ 52(5)ರನ್ವಯ "ಅನುಪಯುಕ್ತ" ಎಂದು ಘೋಷಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಗುರುಬಸಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರ)

**PR. 593** ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ. (ಸಂಪರ್ಕ)

**ಒಳಾಡಳಿತ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ಸನ್ನಡತೆ ಆಧಾರದ ಮೇಲೆ ಜೀವಾವಧಿ ಶಿಕ್ಷಾ ಬಂದಿಗಳನ್ನು **ಅಕಾಲಿಕ** ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 138 ಪಿಆರ್‌ಎ 2013 ದಿನಾಂಕ: 18–9–2014.
2. ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರ ಪತ್ರ ಸಂಖ್ಯೆ: ಜೆ2:ಸಿಆರ್–07:2014–15 ದಿನಾಂಕ:29–7–2015.
3. ಗೌ: ಸರ್ವೋಚ್ಚ ನ್ಯಾಯಾಲಯದ ಮಧ್ಯಂತರ ಆದೇಶ ದಿನಾಂಕ: 23–7–2015.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಸನ್ನಡತೆ ಆಧಾರದ ಮೇಲೆ ಶಿಕ್ಷಾ ಬಂದಿಗಳನ್ನು ಬಿಡುಗಡೆ ಮಾಡುವ ಸಂಬಂಧದಲ್ಲಿ ಮಾರ್ಗಸೂಚಿಗಳನ್ನು ಹೊರಡಿಸಿರುತ್ತದೆ.ಈ ಆದೇಶವನ್ನು ಗಮನದಲ್ಲಿಟ್ಟುಕೊಂಡು ಸ್ಥಾಯಿ ಸಲಹಾ ಸಮಿತಿಗಳು ತಮ್ಮ ಶಿಫಾರಸ್ಸುಗಳನ್ನು ಕಾರಾಗೃಹ ಇಲಾಖಾ ಮುಖ್ಯಸ್ಥರಿಗೆ ನೀಡಿರುತ್ತವೆ.

ಓದಲಾದ (2)ರ ಪತ್ರದಲ್ಲಿ ರಾಜ್ಯದ ಕೇಂದ್ರ ಕಾರಾಗೃಹದಲ್ಲಿರುವ ಜೀವಾವಧಿ ಶಿಕ್ಷಾ ಬಂದಿಗಳ ನಡತೆ ಮತ್ತು ಕಾರ್ಯಕ್ಷಮತೆ ಹಾಗೂ ಸನ್ನಡತೆ ಆಧಾರದ ಮೇಲೆ ಅಕಾಲಿಕ ಬಿಡುಗಡೆ ಮಾಡಿ ಸಮಾಜದ ಮುಖ್ಯವಾಹಿನಿಯಲ್ಲಿ ತರುವ ನಿಟ್ಟಿನಲ್ಲಿ, ಕಾರಾಗೃಹ ಇಲಾಖೆಯ ಮುಖ್ಯಸ್ಥರು 260 ಶಿಕ್ಷಾ ಬಂದಿಗಳ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಈ ಪೈಕಿ

- ಮಾಫಿ ರಹಿತ 14 ವರ್ಷ ಶಿಕ್ಷೆ ಪೂರೈಸಿದ 66 ಶಿಕ್ಷಾ ಬಂದಿಗಳಲ್ಲಿ ಇಬ್ಬರು (02) ಬಂದಿಗಳು ಪೆರೋಲ್ ರಜೆ ಮೇಲೆ ತೆರಳಿದಾಗ ಆತ್ಮಹತ್ಯೆ ಮಾಡಿಕೊಂಡಿರುವುದರಿಂದ 64 ಪ್ರಕರಣಗಳು ಇರುತ್ತವೆ.
- ಮಾಫಿ ಸಹಿತ 14 ವರ್ಷ ಶಿಕ್ಷೆ ಪೂರೈಸಿದ 194 ಶಿಕ್ಷಾ ಬಂದಿಗಳಲ್ಲಿ ಮೂರು (03) ಪ್ರಕರಣಗಳಲ್ಲಿ ಗೌ: ಸರ್ವೋಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಬಾಕಿಯಿರುತ್ತದೆ. ಇನ್ನಿಬ್ಬರು (02) ಶಿಕ್ಷಾ ಬಂದಿಗಳ ವಿರುದ್ಧ ಎರಡನೇ ಪ್ರಕರಣ ದಾಖಲಾಗಿರುವುದರಿಂದ, 189 ಪ್ರಕರಣಗಳು ಇರುತ್ತವೆ.

ಪ್ರಸ್ತಾಪಿಸಿದ 253 ಜೀವಾವಧಿ ಶಿಕ್ಷಾ ಬಂದಿಗಳ ಅಕಾಲಿಕ ಬಿಡುಗಡೆಯ ಕಾರಾಗೃಹವಾರು ವಿವರಗಳು ಈ ಕೆಳಕಂಡಂತೆ ಇರುತ್ತದೆ:–

| ಕ್ರ ಸಂ | ಕೇಂದ್ರ ಕಾರಾಗೃಹದ ಹೆಸರು | 14 ವರ್ಷ ವಾಸ್ತವ ಶಿಕ್ಷೆ ಪೂರೈಸಿದ ಜೀವಾವಧಿ ಶಿಕ್ಷಾ ಬಂದಿಗಳನ್ನು ಸ್ಥಾಯಿ ಸಲಹಾ ಮಂಡಳಿ ಶಿಫಾರಸ್ಸು ಮಾಡಿದ ಬಂದಿಗಳ ಸಂಖ್ಯೆ | | ಮಾಫಿ ಸೇರಿ 14 ವರ್ಷ ಶಿಕ್ಷೆ ಪೂರೈಸಿದ ಜೀವಾವಧಿ ಶಿಕ್ಷಾ ಬಂದಿಗಳನ್ನು ಸ್ಥಾಯಿ ಸಲಹಾ ಮಂಡಳಿ ಶಿಫಾರಸ್ಸು ಮಾಡಿದ ಬಂದಿಗಳ ಸಂಖ್ಯೆ | | ಒಟ್ಟು | |
|---|---|---|---|---|---|---|---|
| | | ಪುರುಷ | ಮಹಿಳೆ | ಪುರುಷ | ಮಹಿಳೆ | ಪುರುಷ | ಮಹಿಳೆ |
| 1 | ಬೆಂಗಳೂರು | 23 | 0 | 119 | 02 | 144 | 02 |
| 2 | ವಿಜಯಪುರ | 03 | 0 | 05 | 0 | 08 | 0 |
| 3 | ಬೆಳಗಾವಿ | 01 | 0 | 0 | 0 | 01 | 0 |
| 4 | ಧಾರವಾಡ | 02 | 0 | 01 | 0 | 04 | 0 |
| 5 | ಮೈಸೂರು | 20 | 0 | 36 | 0 | 59 | 0 |
| 6 | ಬಳ್ಳಾರಿ | 04 | 0 | 20 | 0 | 24 | 0 |
| 7 | ಕಲಬುರ್ಗಿ | 11 | 0 | 06 | 0 | 18 | 0 |
| ಒಟ್ಟು | | 64 | 0 | 187 | 02 | 251 | 02 |

ಗೌ: ಸರ್ವೋಚ್ಚ ನ್ಯಾಯಾಲಯವು ದಿನಾಂಕ: 09-7-2014ರಂದು ರಾಜ್ಯ ಸರ್ಕಾರಗಳು ಶಿಕ್ಷಾ ಬಂದಿಗಳಿಗೆ ಕ್ಷಮಾದಾನ ನೀಡುವ ಅಧಿಕಾರವನ್ನು ಚಲಾಯಿಸಬಾರದೆಂದು ನೀಡಿದ್ದ ತಡೆಯಾಜ್ಞೆಯನ್ನು ದಿನಾಂಕ: 23-7-2015ರ ಮಧ್ಯಂತರ ಆದೇಶದನ್ವಯ ತೆರವುಗೊಳಿಸಿರುತ್ತದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 220 ಪಿಆರ್‌ಎ 2014, ಬೆಂಗಳೂರು, ದಿನಾಂಕ: 16-9-2015**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಗೌ: ಸರ್ವೋಚ್ಚ ನ್ಯಾಯಾಲಯದ ಮಧ್ಯಂತರ ಆದೇಶ ದಿನಾಂಕ: 23-7-2015ರಲ್ಲಿನ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಭಾರತದ ಸಂವಿಧಾನದ ಅನುಚ್ಛೇದ 161ರನ್ವಯ ಘನತೆವೆತ್ತ ರಾಜ್ಯಪಾಲರ ಅಂಗೀಕಾರದೊಂದಿಗೆ ಮಾಫಿ ರಹಿತ 14 ವರ್ಷ ಶಿಕ್ಷೆ ಪೂರೈಸಿದ 63 ಶಿಕ್ಷಾ ಬಂದಿಗಳು ಮತ್ತು ಮಾಫಿ ಸಹಿತ 14 ವರ್ಷ ಶಿಕ್ಷೆ ಪೂರೈಸಿದ **189 ಶಿಕ್ಷಾ ಬಂದಿಗಳು** ಸೇರಿದಂತೆ ಈ ಕೆಳಕಂಡ ಒಟ್ಟು 252 ಜೀವಾವಧಿ ಶಿಕ್ಷಾ ಬಂದಿಗಳನ್ನು ಸನ್ನಡತೆ ಆಧಾರದ ಮೇಲೆ ಅಕಾಲಿಕ ಬಿಡುಗಡೆ ಮಾಡಿ ಆದೇಶಿಸಿದೆ.

**14 ವರ್ಷ ಹಾಗೂ ಅದಕ್ಕೂ ಮೇಲ್ಪಟ್ಟು ವಾಸ್ತವ ಶಿಕ್ಷೆ ಪೂರ್ಣಗೊಳಿಸಿದ ಜೀವಾವಧಿ ಶಿಕ್ಷಾ ಬಂದಿಗಳು**

| 1) | | **ಕೇಂದ್ರ ಕಾರಾಗೃಹ ಬೆಂಗಳೂರು** |
|---|---|---|
| 1 | 432 | ಬಿ. ಶೇಖರ @ ಪಾಪಣ್ಣ ತಂದೆ ಬಸಪ್ಪ, ಸಿದ್ದೇಶ್ವರ ಗ್ರಾಮ, ಬೋರನಹಳ್ಳಿ ಅಂಚೆ, ತರೀಕೆರೆ ತಾ॥, ಚಿಕ್ಕಮಗಳೂರು ಜಿಲ್ಲೆ. |
| 2 | 1219 | ರಾಜೇಂದ್ರನ್ ತಂದೆ ಕಣ್ಣನ್, ನಂ.738, 28ನೇ ಬಿ ಮೈನ್, ಕಾರ್ಪೋರೇಶನ್ ಕಾಲೋನಿ, ತಿಲಕನಗರ, ಜಯನಗರ 9ನೇ ಬ್ಲಾಕ್, ಬೆಂಗಳೂರು |
| **3** | **459** | ತಿಮಯ್ಯ ತಂದೆ ತಿಮ್ಮೆಗೌಡ @ ತಿಮ್ಮಯ್ಯ ಹಳ್ಳಿಕುಳ್ಳೇದೊಡ್ಡಿ ಗ್ರಾಮ, ಟಿ.ನರಸಿಪುರ ತಾಲ್ಲೂಕು, ಮೈಸೂರು |
| **4** | **18827** | ಅಂಜನಿ ತಂದೆ ನಿಟ್ಟೂರುಹನುಮಯ್ಯ  ಡಿ.ಹೊಸಹಳ್ಳಿ, ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ. |
| **5** | **7643** | ಮಂಜಯ್ಯ ತಂದೆ ಚನ್ನಯ್ಯ ಅಣಚೂರು ಗ್ರಾಮ ಮೂಡಿಗೆರೆ ತಾಲ್ಲೂಕು ಚಿಕ್ಕಮಗಳೂರು ಜಿಲ್ಲೆ |
| **6** | **11486** | ಮಾರಪ್ಪ ತಂದೆ ವಲಸಪ್ಪ, ಪೊನ್ನಸಮುದ್ರ ಗ್ರಾಮ ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ. |
| **7** | **260** | ಕೆ.ಲಿಂಗರಾಜು ತಂದೆ ಕೆಂಪಯ್ಯ ದಂಜಕ್ಕನಹಳ್ಳಿ, ನಾಗಮಂಗಲ, ಮಂಡ್ಯ |
| **8** | **349** | ಅನ್ವರ್ ಪಾಷ @ ಬಾಷ ತಂದೆ ಅಬ್ದುಲ್ ಷರೀಫ್, ಅಯಿಲ್ ಮಿಲ್ ರಸ್ತೆ ಕೋಳಿ ಫಾರಂ ರಸ್ತೆ ಲಿಂಗರಾಜಪುರ, ಬೆಂಗಳೂರು |
| 9 | 9822 | ಕೃಷ್ಣ ತಂದೆ ಎಂ.ವಿ. ರಾಜ, ರೂಪೇನಅಗ್ರಹಾರ, ಹೊಸೂರು ರಸ್ತೆ, ಮಡಿವಾಳ, ಬೆಂಗಳೂರು. |
| 10 | 10885 | ಶಿವಣ್ಣ. ತಂದೆ. ಈರಯ್ಯ ಟಿಂಬರ್‌ಲೇಔಟ್, ಜನತಾ ಕಾಲೋನಿ, 2ನೇ ಅಡ್ಡರಸ್ತೆ, ಹಳೇಗುಡ್ಡದಹಳ್ಳಿ, ಮೈಸೂರು ರಸ್ತೆ, ಬೆಂಗಳೂರು |
| 11 | 6987 | ಎಂ.ಎನ್.ರಾಮದಾಸ ತಂದೆ ನಾರಾಯಣ ಐಯ್ಯಂಗರ್, ಮಾವನೂರು ಗ್ರಾಮ, ಹೊಳೆನರಸೀಪುರ ತಾ॥, ಹಾಸನ ಜಿ॥ |
| 12 | 1607 | ಮಂಜ @ಮಂಗ @ಪಾಪಣ್ಣ ತಂದೆ ಚೌಡಾಭೋವಿ, ಮಂಚೇನಹಳ್ಳಿ ಗ್ರಾಮ, ತರೀಕೆರೆ ತಾ॥, ಚಿಕ್ಕಮಗಳೂರು ಜಿಲ್ಲೆ. |
| 13 | 500 | ಪ್ರದೀಪ ತಂದೆ ನಾರಾಯಣಪ್ಪ, ಸಂತೆಪೇಟೆ ಶಿರಾ ಟೌನ್, ಶಿರಾ, ತುಮಕೂರು |
| 14 | 11485 | ರಾಜಣ್ಣ ತಂದೆ ವಲಸಪ್ಪ, ಪೊನ್ನಸಮುದ್ರ ಗ್ರಾಮ ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ. |
| 15 | 10886 | ವೀರಭದ್ರ ತಂದೆ ಈರಯ್ಯ, ಜನತಾ ಕಾಲೋನಿ, ಹಳೇಗುಡ್ಡದ ಹಳ್ಳಿ, ಮೈಸೂರು ರಸ್ತೆ, ಬೆಂಗಳೂರು. |
| 16 | 8620 | ಷಣ್ಮುಗಂ @ ಇಶ್ತಿ ತಂದೆ ಮಣಿ, ನಂ.6, 1ನೇ ಕ್ರಾಸ್, ಮುದ್ದಪ್ಪ ಗಾರ್ಡನ್, ಶ್ರೀರಾಮಪುರ, ಬೆಂಗಳೂರು. |
| 17 | 441 | ನಾರಾಯಣಪ್ಪ ತಂದೆ ಮರಿಯಪ್ಪ, ನಾಡಕಲಿ,  ಗ್ರಾಮ, ಸಾಗರ ತಾಲ್ಲೂಕು ಶಿವಮೊಗ್ಗ ಜಿಲ್ಲೆ, |

| | | |
|---|---|---|
| 18 | 312 | ನಾಗ ತಂದೆ ಚಿನ್ನಪ್ಪ ನಂ 2/2, 7ನೇ ಕ್ರಾಸ್, ಕೆ.ಪಿ ಅಗ್ರಹಾರ, ಮಾಗಡಿ ರಸ್ತೆ ಬೆಂಗಳೂರು |
| 19 | 342 | ರವಿ @ರವಿಕುಮಾರ್ ತಂದೆ ತೊಪೇಗೌಡ, ಕಾಡೆಹಳ್ಳಿ ಗ್ರಾಮ ತುರುವೆಕೆರೆ ತಾಲ್ಲೂಕು, ತುಮಕೂರು ಜಿಲ್ಲೆ |
| 20 | 539 | ಮಾರಿಯಪ್ಪನ್ ತಂದೆ ಮುನಿಯಪ್ಪ , ಕೊಳಚೆ ನಿರ್ಮಾಣ ಮಂಡಳಿ ಕ್ವಾಟ್ರಸ್, ನಂದಿನಿ ಬಡಾವಣೆ, ಬೆಂಗಳೂರು |
| 21 | 6424 | ಎಂ.ವಿ ರಾಮಚಂದ್ರ ತಂದೆ ಲೇಟ್ ವೆಂಕಟಯ್ಯ ಟಿ.ಮಲ್ಲಿಗೆರೆ ಹಳ್ಳಿ, ತಗ್ಗಹಳ್ಳಿ ಪೋಸ್ಟ್, ಕೊತ್ತತ್ತಿ ಹೋಬಳಿ, ಮಂಡ್ಯ ಜಿಲ್ಲೆ |
| 22 | 11292 | ವೆಂಕಟೇಶ್ ಬಿನ್ ತಿಮ್ಮಯ್ಯ, ಮುದಗೆರೆ ಪಾಳ್ಯ, ಗೂಳೂರು ಹೋಬಳಿ, ತುಮಕೂರು ಜಿಲ್ಲೆ |
| 23 | 7815 | ನಾಗೇಶ @ ನಾಗೇಂದ್ರ ಬಿನ್ ಬಸಪ್ಪ, ಸಿದ್ದೇಶ್ವರ ಗ್ರಾಮ, ತರೀಕೆರೆ ತಾ॥ ಚಿಕ್ಕಮಗಳೂರು ಜಿಲ್ಲೆ. |
| 24 | 9699 | ಎಸ್.ರಮೇಶ @ ಬರ್ಕಲಿರಾಮ ತಂದೆ ಲೇಟ್ ಸಿದ್ದೇಗೌಡ ಕಿರಗಂದೂರು ಗ್ರಾಮ, ದುದ್ದ ಹೋಬಳಿ, ಮಂಡ್ಯ ತಾ॥ & ಜಿಲ್ಲೆ |
| 25 | 10026 | ಶ್ರೀಧರ ಬಿನ್ ಆನಂದ, ಅಂಬೇಡ್ಕರ್ ಮೆಡಿಕಲ್ ಕಾಲೇಜು, ಡಿ.ಜೆ.ಹಳ್ಳಿ, ಬೆಂಗಳೂರು |
| | 2) | **ಕೇಂದ್ರ ಕಾರಾಗೃಹ ವಿಜಯಪುರ** |
| **26** | 3237 | ಮಲ್ಲಪ್ಪ ತಂದೆ ಭೀಮಣ್ಣ ಕಟ್ಟಿಮನಿ ಸಾ॥ ಬರಡೋಳ, ತಾ॥ ಇಂಡಿ, ಜಿಲ್ಲಾ॥ ವಿಜಯಪುರ |
| **27** | 3293 | ತುಕಾರಾಮ ಪುಂಡಲೀಕ ಕಟ್ಟಿಮನಿ ಸಾ॥ಬರಡೋಳ, ಇಂಡಿ ತಾ॥ & ಜಿಲ್ಲಾ॥ ವಿಜಯಪುರ |
| **28** | 2167 | ಮೋತಿಲಾಲ ಅಬ್ದುಲನಬಿ ನಾಯ್ಕೋಡಿ, ಸಾ॥ ಆಲಮೇಲ, ತಾ॥ ಸಿಂದಗಿ ಜಿ॥ ವಿಜಯಪುರ |
| | 3) | **ಕೇಂದ್ರ ಕಾರಾಗೃಹ ಬೆಳಗಾವಿ** |
| **29** | 16544 | ಗುರುಪುತ್ರಪ್ಪ ಶಿವಬಸಪ್ಪ ದೊಡ್ಡಗೌಡರ ಸಾ:ಮದನಬಾವಿ, ತಾ:ಬೈಲಹೊಂಗಲ, ಜಿ:ಬೆಳಗಾವಿ. |
| | 4) | **ಕೇಂದ್ರ ಕಾರಾಗೃಹ ಧಾರವಾಡ** |
| **30** | 1958 | ಮಂಜುನಾಥ ಸಿದ್ದಪ್ಪ ಐರಣಿ. ಸಾ॥ಬೂಸಪ್ಪಚೌಕ, ಧಾರವಾಡ. |
| **31** | 2434 | ಪಾಪಣ್ಣ ಉರ್ಫ್ ಬಸವರಾಜ ಶಿವಪ್ಪ ಘೋಡಕೆ ಸಾ॥ಸಂಘಟಕೊಪ್ಪ ತಾ॥ಕಲಘಟಗಿ ಜಿ॥ಧಾರವಾಡ. |
| | 5) | **ಕೇಂದ್ರ ಕಾರಾಗೃಹ ಮೈಸೂರು** |
| **32** | 11000 | ಶ್ರೀನಿವಾಸ @ ಚಿನ್ನಾಂಜನೇಯ ತಂದೆ ವೀರಪ್ಪ. ಮಕ್ಕಿ ಭೈಲು ಮನೆ, ಬಾರ್ಕೂರು, ಕಾಚೂರು ಗ್ರಾಮ, ಉಡುಪಿ ತಾ:: ಮತ್ತು ಜಿಲ್ಲೆ. |
| **33** | 11477 | ಮಹದೇವಶೆಟ್ಟಿ ತಂದೆ ಸುಬ್ಬಯ್ಯನ ಮಾದಶೆಟ್ಟಿ. ಕೆಬ್ಬೇಪುರ ಗ್ರಾಮ,ನಂಜನಗೂಡು ತಾ॥, ಮೈಸೂರು ಜಿಲ್ಲೆ |
| **34** | 12305 | ಜಾವೆದ್ ತಂದೆ ಬಾಷಾ @ ಲಕ್ಕೂರು ಬಾಷಾ.ಆಜಾದ್ ಮೋಹಲ್ಲಾ, ಹಾಸನ |
| **35** | 12395 | ಎ.ಅಬ್ದುಲ್ ಖಾದರ್ @ ಖಾದರ್ ತಂದೆ ಐಮದ್. ಕುರುಲಿ ಪೈಸಾರಿ ನಾಪೋಕ್ಲು ಗ್ರಾಮ ಮಡಿಕೇರಿ ತಾ॥ ಮತ್ತು ಜಿಲ್ಲೆ |
| **36** | 12442 | ಭರತ್ ಶೆಟ್ಟಿಗಾರ್ ತಂದೆ ಮಾಧವಶೆಟ್ಟಿಗಾರ್. ಅಮಾವಾಸೆ ಬೈಲು ಗ್ರಾಮ ಮತ್ತು ಅಂಚೆ,ಕುಂದಾಪುರ ತಾ॥ ಉಡುಪಿ ಜಿಲ್ಲೆ |
| **37** | 12492 | ಎಂ.ಮಹದೇವ ತಂದೆ ಲೇಟ್ ಮುತ್ತುಮಾದ ಶೆಟ್ಟಿ ರಾಮಾಪುರ ಗ್ರಾಮ, ಕೊಳ್ಳೇಗಾಲ ತಾ॥ ಚಾಮರಾಜನಗರ ಜಿಲ್ಲೆ |
| **38** | 12516 | ಪುಟ್ಟಮಾದ ತಂದೆ ಮಾದಯ್ಯ. ಹೆರಳೆ ಗ್ರಾಮ, ಕೊಳ್ಳೆಗಾಲ ತಾ॥ ಚಾಮರಾಜನಗರ ಜಿಲ್ಲೆ |
| **39** | 12729 | ಅರುಗಂ ತಂದೆ ಚನ್ನಯ್ಯ ಗೌಂಡರ್.ಬಸವನಪುರ ಗ್ರಾಮ ಚಾಮರಾಜನಗರ ತಾ॥ & ಜಿಲ್ಲೆ |
| **40** | 12959 | ಶರವಣ ತಂದೆ ಮಲೆಯಪ್ಪನ್. ಕಳ್ಳಪಟ್ಟಿ ಗ್ರಾಮ ಗೋಪಿ ತಾ॥ ಈರೋಡ್ ಜಿಲ್ಲೆ ತಮಿಳುನಾಡು |
| **41** | 13014 | ರಾಜ ತಂದೆ ರಂಗಯ್ಯ @ ಮೋಟಯ್ಯ. ನೇರಳೆ ಕುಪ್ಪೆ 'ಎ' ಕಾಲೋನಿ ಹನಗೋಡು ಹೋಬಳಿ, ಹುಣಸೂರು ತಾ:: ಮೈಸೂರು ಜಿಲ್ಲೆ |
| **42** | 13056 | ಈರಣ್ಣ@ವೀರಣ್ಣೆ@ ವೀರಭದ್ರಪ್ಪ ತಂದೆ ಲೇ:: ಬಸಪ್ಪ. ಕಪ್ಪಸೋಗೆ ಗ್ರಾಮ, ನಂಜನಗೂಡು ತಾ:: ಮೈಸೂರು ಜಿಲ್ಲೆ. |
| **43** | 13981 | ಕಾಳಯ್ಯ ತಂದೆ ವರದಯ್ಯ. ಮಲಯ್ಯನ ಪುರ ಗ್ರಾಮ, ಚಾಮರಾಜನಗರ ತಾಲ್ಲೂಕು ಮತ್ತು ಜಿಲ್ಲೆ. |
| **44** | 14061 | ಜವರ@ಕೋತಿ ಜವರಶೆಟ್ಟಿ ತಂದೆ ಮರಂಕಶೆಟ್ಟಿ. ಅನ್ನೂರುಕೇರಿ ಗ್ರಾಮ, ಗುಂಡ್ಲುಪೇಟೆ ತಾಲ್ಲೂಕು ಚಾಮರಾಜನಗರ ಜಿಲ್ಲೆ. |
| **45** | 15036 | ಕೆ.ಆರ್.ಸತೀಶ್ ತಂದೆ ಟೈಲರ್ ರಾಜು. ಕೊಪ್ಪ ಗ್ರಾಮ, ಪಿರಿಯಾಪಟ್ಟಣ್ಣ ತಾಲ್ಲೂಕು ಮೈಸೂರು ಜಿಲ್ಲೆ. |
| **46** | 15923 | ಇಲಿಯಾಸ್ ಷರೀಫ್ ತಂದೆ ಇಬ್ರಾಹಿಂ ಷರೀಫ್. ನಂ,3206/2ಎ, ಮಹದೇವಪುರ ಮುಖ್ಯ ರಸ್ತೆ ಮೊಹಮ್ಮದ್ ಸಯ್ಯದ್ ಬ್ಲಾಕ್ ಲಷ್ಕರ್ ಮೊಹಲ್ಲಾ ಮೈಸೂರು. |
| **47** | 16491 | ಎಚ್.ಎಸ್.ಮಣಿ @ ಕುಟ್ಟಪ್ಪ ತಂದೆ ಸುಬ್ಬಯ್ಯ. ಪರನೇ ಗ್ರಾಮ, ವೀರಾಜಪೇಟೆ ತಾಲ್ಲೂಕು, ಕೊಡಗು ಜಿಲ್ಲೆ. |

| | | |
|---|---|---|
| **48** | 17917 | ಹನುಮಂತ @ ಮಂತು ತಂದೆ ಲೇಟ್ ರಾಜಯ್ಯ. ಎ.ಡಿ.ಕಾಲೋನಿ, ಚನ್ನರಾಯಪಟ್ಟಣ ಟೌನ್, ಹಾಸನ ಜಿಲ್ಲೆ. |
| **49** | 17919 | ಮಂಜುನಾಥ @ ಮಂಜು ತಂದೆ ಪಾಪಣ್ಣ @ ಕೈದಿ ಪಾಪಣ್ಣ. ಎ.ಡಿ.ಕಾಲೋನಿ, ಚನ್ನರಾಯಪಟ್ಟಣ ಟೌನ್, ಹಾಸನ ಜಿಲ್ಲೆ. |
| **50** | 17920 | ಲಕ್ಷ್ಮಣ ತಂದೆ ರಾಮನಾಯ್ಕ. ಹಲುವಳ್ಳಿ ಗ್ರಾಮ, ಆಲೂರು ತಾಲ್ಲೂಕು, ಹಾಸನ ಜಿಲ್ಲೆ. |
| 6) | | **ಕೇಂದ್ರ ಕಾರಾಗೃಹ ಬಳ್ಳಾರಿ** |
| **51** | 8642 | ಹರಿಜನ ಖಾನಾಮಡಗು ತಿಪ್ಪೇಸ್ವಾಮಿ ತಂದೆ ಬಸಪ್ಪ ಅರಕಭಾವಿ ಗ್ರಾಮ, ಕೂಡ್ಲಿಗಿ ತಾಲೂಕ, ಬಳ್ಳಾರಿ ಜಿಲ್ಲೆ. |
| **52** | 8721 | ಮೇಘಾನಾಯ್ಕ ತಂದೆ ಮಂಜಾನಾಯ್ಕ, ಡೊಂಬರಳ್ಳಿ ತಾಂಡ, ಹಡಗಲಿ ತಾಲೂಕ, ಬಳ್ಳಾರಿ ಜಿಲ್ಲೆ. |
| **53** | 8442 | ಮಾರೆಣ್ಣ ತಂದೆ ಗಂಗಣ್ಣ ದೊಡ್ಡ ಉಳ್ಳಾರ್ತಿ ಗ್ರಾಮ ಚಳ್ಳಕೆರೆ ತಾಲೂಕ, ಚಿತ್ರದುರ್ಗ ಜಿಲ್ಲೆ. |
| **54** | 11575 | ಮಹಮ್ಮದ್ ಜೈನುಲ್ಲಾ ಅಭಿದಿನ್ ತಂದೆ ಸೈಯ್ಯದ್ ಅಲಿ, ಬಜಾರ್ ರಸ್ತೆ, ಖಾಜಿ ಮೊಹಲ್ಲಾ, ಹುಣಸೂರು ತಾಲ್ಲೂಕ, ಮೈಸೂರು ಜಿಲ್ಲೆ. |
| 7) | | **ಕೇಂದ್ರ ಕಾರಾಗೃಹ ಕಲಬುರಗಿ** |
| **55** | 14338 | ಅಬ್ಬಾಸ ತಂದೆ ಪಾಶಾಮಿಯಾ ಸಾ॥ ಜೋಜನಾ ತಾ॥ ಔರಾದ ಜಿಲ್ಲೆ॥ಬೀದರ |
| **56** | 14601 | ಭೀಮಶಾ ತಂದೆ ಹೈಬತ್ತಿ ಸಾ॥ ಸಿತಾಳಗೇರಾ ತಾ॥ಹುಮ್ನಾಬಾದ ಜಿಲ್ಲೆ॥ ಬೀದರ |
| **57** | 14603 | ಕರಬಸ್ಸಪ್ಪ ತಂದೆ ವಿಠ್ಠಲ ಸಾ॥ನವದಗಿ ಹಳ್ಳಿ ತಾ॥ ಆಳಂದ ಜಿಲ್ಲೆ॥ ಕಲಬುರಗಿ |
| **58** | 14705 | ಯಂಕಪ್ಪ ತಂದೆ ಅಯ್ಯಪ್ಪ, ಸಾಕಿನ್: ಬೈಲಗುಡ್ಡ ತಾ: ಲಿಂಗಸುಗೂರು ಜಿ:ರಾಯಚೂರ |
| **59** | 14743 | ಲಕ್ಷ್ಮೀಕಾಂತ ತಂದೆ ಪಾಂಡುರಂಗ ಸಾ:ಏಕಂಬಾ ತಾ:ಬಸವಕಲ್ಯಾಣ ಜಿಲ್ಲೆ: ಬೀದರ |
| **60** | 14337 | ನಬೀ ತಂದೆ ಪಾಶಾಮಿಯಾ ಸಾ॥ ಜೋಜನಾ ತಾ॥ ಔರಾದ ಜಿಲ್ಲೆ॥ ಬೀದರ |
| **61** | 14707 | ಕಿಡಿಯಪ್ಪ ತಂದೆ ಹನುಮಂತ ಸಾಕಿನ್: ಬೈಲಗುಡ್ಡ, ತಾ:ಲಿಂಗಸಗೂರು ಜಿ: ರಾಯಚೂರು |
| **62** | 15039 | ಮನೋಹರ ತಂದೆ ನರಸಿಂಗರಾವ್ ಸಾ: ಮಿರಕಲ್ ತಾ:ಬಸವಕಲ್ಯಾಣ ಜಿ: ಬೀದರ |
| **63** | 15489 | ದೈತಪ್ಪ ತಂದೆ ಸಾಯಿಬಣ್ಣ ಸಾ:ಮೋಘಾ(ಬಿ) ತಾ: ಆಳಂದ ಜಿ: ಗುಲಬರ್ಗಾ |

**ಮಾಫಿ ಸಹಿತ 14 ವರ್ಷ ಶಿಕ್ಷೆ ಪೂರ್ಣಗೊಳಿಸಿದ ಜೀವಾವಧಿ ಶಿಕ್ಷಾ ಬಂದಿಗಳು**

| | | |
|---|---|---|
| **1)** | | **ಕೇಂದ್ರ ಕಾರಾಗೃಹ ಬೆಂಗಳೂರು** |
| **1** | **6490** | ನಾಗರಾಜು ತಂದೆ ಕದ್ರಿ ಕೊಂಡಪ್ಪ, ಕದ್ರಿನಾಥನಕೋಟೆ, ಮೊಳಕಾಲ್ ಚೆರು, ಮದಲಂ, ಮದನಪಲ್ಲಿ, ಚಿತ್ತೂರು ಜಿಲ್ಲೆ, ಆಂಧ್ರಪ್ರದೇಶ ರಾಜ್ಯ |
| **2** | **109** | ರಾಮಾಂಜಿನಿ @ರಾಮಾಂಜನಯ್ಯ ತಂದೆ ಗೋಪಾಲಯ್ಯ, ಲಿಂಗನಹಳ್ಳಿ, ಹೇಸರಘಟ್ಟ ಹೋಬಳಿ, ಬೆಂಗಳೂರು ಉತ್ತರ. |
| **3** | **8044** | ಮಂಜ @ ಮಂಜುನಾಥ ತಂದೆ ಪಾಂಡುರಂಗ ರಾವ್, ನಂ. 9, ಸ್ವಾತಿ ರೋಡ್ ಕ್ರಾಸ್, ಶಾಂತಿನಗರ, ಬೆಂಗಳೂರು. |
| **4** | **6431** | ಕರಿಯಪ್ಪ @ ಕರಿಯ @ ವೆಂಕಟ ತಂದೆ ವೆಂಕಟಯ್ಯ, ದೇಲವೈ ಕೋಡಿಹಳ್ಳಿ, ಮಳವಳ್ಳಿ ತಾಲ್ಲೂಕು, ಮಂಡ್ಯ ಜಿಲ್ಲೆ |
| **5** | **282** | ನರಸಿಂಹರಾಜು ತಂದೆ ಉರುಗಯ್ಯ, ಕುಪ್ಪಾಳು ಗ್ರಾಮ ತಿಪಟೂರು ತಾಲ್ಲೂಕು ತುಮಕೂರು ಜಿಲ್ಲೆ |
| **6** | **580** | ಗೋಪಿ @ ಕರಿಯ ತಂದೆ ಪಳನಿಸ್ವಾಮಿ ನಂ.169, 3ನೇ ಕ್ರಾಸ್ ರಾಬರ್ಟ್ ಸನ್ ಬ್ಲಾಕ್, ಆರ್.ಸಿ ಪುರಂ, ಬೆಂಗಳೂರು |
| **7** | **371** | ಕಾಳಯ್ಯ ತಂದೆ ರಂಗಪ್ಪ, ತಟ್ಟಸಂದ್ರ ಗ್ರಾಮ, ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ |
| **8** | **8615** | ಆನಂದ @ ಕಂಠಿ ತಂದೆ ಲೇಟ್ ಶ್ರೀನಿವಾಸ, ವಿನೋಬ ನಗರ, 2 ನೇ ಕ್ರಾಸ್, ಮೇದಾರ ಕೇರಿ, ಶಿವಮೊಗ್ಗ. |
| **9** | **368** | ಗೌಡಯ್ಯ ತಂದೆ ಮೂಡಲಗಿರಿಯಯ್ಯ ತಟ್ಟಸಂದ್ರ ಗ್ರಾಮ, ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ |
| **10** | **200** | ಧನಂಜಯ ರೆಡ್ಡಿ ಬಿನ್ ವೆಂಕಟರೆಡ್ಡಿ, ನಂ. 2/389, ಕೋ ಆಪರೇಟಿವ್ ಸೊಸೈಟಿ ಕಾಲೋನಿ, ವೆಂಕಟಪುರಂ, ಚಿತ್ತೂರು ಜಿಲ್ಲೆ, ಆಂಧ್ರ ಪ್ರದೇಶ್ ರಾಜ್ಯ |
| **11** | **7584** | ಪರಮಾನಂದ ಬಿನ್ ಮುನಿಸ್ವಾಮಿ, ನಂ. 12, ಅಶ್ವಥನಗರ, ಬೆಂಗಳೂರು. |
| **12** | **370** | ಕುಮಾರ @ ಪಾಪ @ ಲಕ್ಷ್ಮಣ ತಂದೆ ನಿಂಗಯ್ಯ ತಟ್ಟಸಂದ್ರ ಗ್ರಾಮ, ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ |
| **13** | **8459** | ರಾಮಮೂರ್ತಿ ತಂದೆ ಸ್ವಾಮಿಯಪ್ಪ ಗೌಂಡರ್, ಪೂಜೇನ್ ಅಗ್ರಹಾರ, ಬಚ್ಚೇಗೌಡ, ಮಾವಿನತೋಪು, ಯಾಲದಿಂಗಲಪಟ್ಟಿ ಗ್ರಾಮ, ಈಂಗೂರು ಅಂಚೆ, ಪೆರಂದರೈ ತಾ॥, ಈರೋಡ್ ಜಿಲ್ಲೆ, ತಮಿಳುನಾಡು. |
| **14** | **11693** | ಕೆ.ಎಸ್. ಮಂಜುನಾಥ ತಂದೆ ಶಂಕರಪ್ಪ, ಬೇಲೂರನಹಳ್ಳಿ ಗ್ರಾಮ, ತಿಪಟೂರು ತಾ॥, ತುಮಕೂರು ಜಿಲ್ಲೆ |
| **15** | **555** | ಮುಕ್ತಿಯಾರ್ ತಂದೆ ಮಹಮದ್ ಗೌಸ್, 7ನೇ ಕ್ರಾಸ್, ಷಾದಿ ಮೊಹಲ್ಲಾ, ಟಿಪ್ಪು ನಗರ, ಶಿವಮೊಗ್ಗ |

| | | |
|---|---|---|
| 16 | 435 | ಗೋವಿಂದ ಸ್ವಾಮಿ @ ಗೋವಿಂದರಾಜು ಬಿನ್ ಸಣ್ಣ ವೇಡಿ, ಜಂಬೂಸವಾರಿ ದಿಣ್ಣೆ, ಕೊತ್ತನೂರು, S.O.S ಪೋಸ್ಟ್, ಬೆಂಗಳೂರು. |
| 17 | 615 | ಶಾಂತನಮಾರಿ ಬಿನ್ ಚಿನ್ನಯ್ಯ, ಬಂಗಾಲಪೇಟೆ, ಪುರಕುಲಂ, ಕಾಲ್ಕುಡಿ ಅಂಚೆ, ತಿರುನಲ್ ವೇಲಿ, ತಮಿಳು ನಾಡು. |
| 18 | 9928 | ಕೆ.ನರಸಿಂಹಮೂರ್ತಿ @ ಕುಪ್ಪ ಬಿನ್ ಕೆ. ಕನಕಪ್ಪ, ನಂ. 75, ಪಾಬಲಮ್ಮ ರಸ್ತೆ, ಕನಕನ ಪಾಳ್ಯ, ಜಯನಗರ 2ನೇ ಹಂತ, ಬೆಂಗಳೂರು. |
| 19 | 9444 | ಶಿವಣ್ಣ ಬಿನ್ ಬೋರಲಿಂಗಯ್ಯ, ಅಲಸಬಾಳೆಗ್ರಾಮ, ಮಾಗಡಿ ತಾ॥, ರಾಮನಗರ ಜಿಲ್ಲೆ. |
| 20 | 8616 | ಪ್ರಶಾಂತ @ ಕಪ್ಪ ಬಿನ್ ಗಂಗಾಧರಪ್ಪ, 2ನೇ ಕ್ರಾಸ್, ಮೇದರಕೇರಿ, ವಿನೋಭನಗರ, ಶಿವಮೊಗ್ಗ. |
| 21 | 564 | ಸುರೇಶ @ ಸೂರಿ ತಂದೆ ಗಂಗಪ್ಪ @ ಗಂಗಯ್ಯ ನಂ.479, 1ನೇ ಮುಖ್ಯ ರಸ್ತೆ 2ನೇ ಅಡ್ಡರಸ್ತೆ, ಗಂಗೊಂಡನ ಹಳ್ಳಿ ಪುರ ಗ್ರಾಮ, ಮಾಗಡಿ ತಾಲ್ಲೂಕು, ರಾಮನಗರ ಜಿಲ್ಲೆ. |
| 22 | 10180 | ಲಕ್ಷ್ಮಯ್ಯ ತಂದೆ ಮಲ್ಲಯ್ಯ, ಅಂಕಾಪುರ ಗ್ರಾಮ, ನಿಟ್ಟೂರು ಹೋಬಳಿ, ಗುಬ್ಬಿ ತಾಲ್ಲೂಕು, ತುಮಕೂರು. |
| 23 | 460 | ವೆಂಕಟೇಗೌಡ @ ವೆಂಕಟಯ್ಯ ಬಿನ್ ತಿಮ್ಮಯ್ಯ @ ತಿಮ್ಮೇಗೌಡ, ಹಳ್ಳ ಕುಳ್ಳ ದೊಡ್ಡಿ ಗ್ರಾಮ್, ಮಳವಳ್ಳಿ ತಾ॥, ಮಂಡ್ಯ ಜಿಲ್ಲೆ. |
| 24 | 2425 | ಪ್ರಕಾಶ್ ತಂದೆ ಸುಬ್ಬರಾಯಪ್ಪ, ಚೀಮಸಂದ್ರ ಗ್ರಾಮ, ಬಿದರಹಳ್ಳಿ ಹೋಬಳಿ, ಹೊಸಕೋಟೆ ತಾ॥, ಬೆಂಗಳೂರು |
| 25 | 9908 | ದರ್ಶನ್ ಬಿನ್ ಸಣ್ಣ ಓಬಯ್ಯ, 2ನೇ ಕ್ರಾಸ್, ಶಾಂತಿನಗರ, ತುಮಕೂರು. |
| 26 | 9237 | ಹೆಚ್.ಆರ್. ಶಿವಕುಮಾರ್ ತಂದೆ ರಾಜಶೇಖರ, ನಂ. 728, ಕೆನರಾ ಬ್ಯಾಂಕ್ ಹತ್ತಿರ, ಗಂಗಮ್ಮ ಕಾಂಪೌಂಡ್, ಬಳ್ಳಾರಿ ಹೆಬ್ಬಾಳ ರಸ್ತೆ, ಬೆಂಗಳೂರು. |
| 27 | 82 | ಚಲ @ ಚಲುವರಾಜು ತಂದೆ ಪಾಂಡುರಂಗ ರಾವ್, ನಂ. 13, 2 ನೇ ಕ್ರಾಸ್, 2 ನೇ ಮುಖ್ಯ ರಸ್ತೆ, ವಿನಾಯಕ ನಗರ ಬೆಂಗಳೂರು. |
| 28 | 15172 | ಮಲ್ಲರಾಜು @ರಾಜು ತಂದೆ ನಂಜಪ್ಪ, ಮುಳ್ಳೂರು ಗ್ರಾಮ, ಕೊಳ್ಳೆಗಾಲ ತಾ॥, ಚಾಮರಾಜನಗರ ಜಿಲ್ಲೆ. |
| 29 | 18184 | ಜಿ.ಎನ್.ದುರ್ಗೇಶ್ ತಂದೆ ನಾರಾಯಣಪ್ಪ , ಕಾಡಪ್ಪಣಕಣ, ಮೊದಲನೇ ರಸ್ತೆ, ದಾವಣಗೆರೆ. |
| 30 | 314 | ಎಸ್.ವಿ. ರಮೇಶ್ ತಂದೆ ಎಸ್.ಆರ್. ವೆಂಕಟೇಗೌಡ, ಆಡುವಳ್ಳಿ, ಸಂಪಿಗೆ ಮನೆ, ಎನ್.ಆರ್.ಪುರ ತಾ॥, ಚಿಕ್ಕಮಗಳೂರು ಜಿಲ್ಲೆ. |
| 31 | 602 | ಮುರುಗನ್ ತಂದೆ ಆರ್ಮುಗಂ, ನಂ. 171, 17ನೇ ಕ್ರಾಸ್, ಕರಿಯಣ್ಣ ಪಾಳ್ಯ, ಲಿಂಗರಾಜಪುರಂ, ಬೆಂಗಳೂರು. |
| 32 | 11254 | ರಮೇಶ ತಂದೆ ಶಿವಣ್ಣ, ಬಿ.ಜಿ. ಮೋಲೆ ಗ್ರಾಮ, ಮಳವಳ್ಳಿ ತಾ॥, ಮಂಡ್ಯ ಜಿಲ್ಲೆ. |
| 33 | 7468 | ತಿಮ್ಮಣ್ಣ ಬಿನ್ ತಿಮ್ಮರಾಯಪ್ಪ, ಮದಮುತ್ತನ ಹಳ್ಳಿ, ಬಂಗಾರಪೇಟೆ, ಕೋಲಾರ. |
| 34 | 11831 | ಶಿವೇಗೌಡ ತಂದೆ ಜವರೇಗೌಡ, ಮೂಡಲಕೊಪ್ಪಲು, ಪಿರಿಯಾಪಟ್ಟಣ, ಮೈಸೂರು ಜಿಲ್ಲೆ. |
| 35 | 8435 | ಗೋಪಾಲ ಪೂಜಾರಿ ತಂದೆ ಗಂಗಾ ಪೂಜಾರಿ, ಕುಂದೂರು ಗ್ರಾಮ, ಮೂಡಿಗೆರೆ ತಾ॥, ಚಿಕ್ಕಮಗಳೂರು ಜಿ॥ |
| 36 | 462 | ಶ್ರೀನಿವಾಸ @ ಸೀನ ತಂದೆ ವೆಂಕಟೇಗೌಡ @ವೆಂಕಟಯ್ಯ, ದೊಡ್ಡಮಲಗೋಡು ಗ್ರಾಮ, ಟಿ. ನರಸೀಪುರ ತಾ॥, ಮೈಸೂರು ಜಿಲ್ಲೆ. |
| 37 | 9698 | ಕೆ.ಎನ್. ಕುಮಾರ ಬಿನ್ ನಾಥೇಗೌಡ, ಕಿರಗಂದೂರು ಗ್ರಾಮ, ಮಂಡ್ಯ ತಾ & ಜಿಲ್ಲೆ. |
| 38 | 447 | ವಿಷಕಂಠ ತಂದೆ ದೊಡ್ಡನಂಜೇಗೌಡ, ಅಂಕುಶನಹಳ್ಳಿ ಗ್ರಾಮ, ಚನ್ನಪಟ್ಟಣ ತಾ॥, ರಾಮನಗರ ಜಿಲ್ಲೆ. |
| 39 | 259 | ಅಶ್ವತ್ಥ ತಂದೆ ಅರಸಪ್ಪ, ಜಯಪುರ ತುಮಕೂರು ನಗರ ತುಮಕೂರು |
| 40 | 115 | ರಮೇಶ ತಂದೆ ಕೃಷ್ಣಪ್ಪ, ನಂ. 13, 2 ನೇ ಮುಖ್ಯ ರಸ್ತೆ, ವಿನಾಯಕನಗರ, ಬೆಂಗಳೂರು – 27. |
| 41 | 9906 | ರಾಘವೇಂದ್ರ @ ರಘು ತಂದೆ ಜಯರಾಮಯ್ಯ, 2ನೇ ಕ್ರಾಸ್, ಶಾಂತಿ ನಗರ, ತುಮಕೂರು. |
| 42 | 9852 | ಮಣಿಕಂಠ @ವಿಶ್ವನಾಥ ತಂದೆ ಸತ್ಯನಾರಾಯಣ, ನಿಮಿಷಾಂಬ ಸ್ವೀಟ್ ಅಂಗಡಿ, ಮಾರ್ಕೆಟ್ ರಸ್ತೆ, ಶ್ರೀರಂಗಪಟ್ಟಣ, ಮಂಡ್ಯ ಜಿಲ್ಲೆ. |
| 43 | 10122 | ಮಲ್ಲೇಶ್ @ಮಲ್ಲೇಶ ಶೆಟ್ಟಿ ತಂದೆ ತಿರುಮಲ ಶೆಟ್ಟಿ, ಮೋದರಹಳ್ಳಿ ಗ್ರಾಮ, ಚಿಕ್ಕಮಗಳೂರು ತಾ॥ & ಜಿಲ್ಲೆ. |
| 44 | 9316 | ನಾರಾಯಣಪ್ಪ ತಂದೆ ರಂಗಯ್ಯ, ನಂ. 126, ಪಿ ಅಂಡ್ ಟಿ.ಲಿಂಗಪ್ಪನ ಮನೆ, ಗುರುಪ್ರಿಯ ಕಲ್ಯಾಣ ಮಂಟಪ ರಸ್ತೆ, ಕರೇಕಲ್ಲು, ಕಾಮಾಕ್ಷಿಪಾಳ್ಯ, ಬೆಂಗಳೂರು. |
| 45 | 8386 | ಎನ್. ಸ್ವಾಮಿ ಬಿನ್ ಸುರೇಶ, ಶ್ರೀಗಂಗಾಧರ ನಗರ, ರಾಜಗೋಪಾಲನಗರ, ಹೆಗ್ಗನ ಹಳ್ಳಿ, ಬೆಂಗಳೂರು. |
| 46 | 8935 | ಕುಪ್ಪುಸ್ವಾಮಿ ತಂದೆ ಉಮಿಯಾ ಭೋವಿ, ತುರಂಗಿಪಟ್ಟಿ ಗ್ರಾಮ, ಹಾರೂರು ತಾ॥, ಧರ್ಮಪುರಿ ಜಿಲ್ಲೆ, ತಮಿಳುನಾಡು. |
| 47 | 448 | ಸಣ್ಣಪ್ಪ @ಸಣ್ಣ ತಂದೆ ದೊಡ್ಡೈದೇಗೌಡ, ಅಂಕುಶನಹಳ್ಳಿ, ಚೆನ್ನಪಟ್ಟಣ ತಾ॥, ರಾಮನಗರ ಜಿಲ್ಲೆ. |
| 48 | 9853 | ಗುಂಡ @ಶಿವಕುಮಾರ ತಂದೆ ಕೃಷ್ಣಪ್ಪ, ಗೋವಿಂದಪ್ಪನ ಬೀದಿ, ಶ್ರೀರಂಗಪಟ್ಟಣ, ಮಂಡ್ಯ ಜಿಲ್ಲೆ. |
| 49 | 9854 | ಪ್ರಭ @ಪ್ರಭಾಕರ @ಹುಚ್ಚಬಂಡೆ ತಂದೆ ದೇವೇಗೌಡ, ಗೂಸೇಗೌಡನ ಬೀದಿ, ಶ್ರೀರಂಗಪಟ್ಟಣ, ಮಂಡ್ಯ ಜಿಲ್ಲೆ. |
| 50 | 369 | ಮೂರ್ತಿ @ ನರಸಿಂಹಮೂರ್ತಿ ತಂದೆ ನಿಂಗಯ್ಯ, ತಟ್ಟಸಂದ್ರ ಗ್ರಾಮ, ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ |
| 51 | 12436 | ಸುಧಾಕರ ಪೂಜಾರಿ ತಂದೆ ರಾಮ ಪೂಜಾರಿ, ರಾಘವೇಂದ್ರ ಕೃಪೆ, ಕೋಣಿದೊಡ್ಡ ಜಡ್ಡು, ಕೋಣಿ ಗ್ರಾಮ, ಕುಂದಾಪುರ ತಾ॥, ಉಡುಪಿ ಜಿಲ್ಲೆ. |
| 52 | 11179 | ಎನ್.ವಿ. ರವಿ @ ರವೀಂದ್ರ ಕುಮಾರ ತಂದೆ ವಿ. ನಾಥನ್, ನಂ. 748, 30 ಬಿ ಕ್ರಾಸ್, ತಿಲಕ್ ನಗರ, ಜಯನಗರ, ಬೆಂಗಳೂರು. |

